ಉಪನ್ಯಾಸ ಗ್ರಂಥಮಾಲೆ

೧೧೫

# ವಚನಕಾರ
# ದೇವರ ದಾಸಿಮಯ್ಯ

ಶ್ರೀ ಎಸ್. ಎಸ್. ಬಾಣದ, ಎಂ. ಎ., ಬಿ. ಎಡ್.




ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ
ಜನವರಿ, ೧೯೭೧

ಉಪನ್ಯಾಸ ಗ್ರಂಥಮಾಲೆ

೧೧೫

# ವಚನಕಾರ

# ದೇವರದಾಸಿಮಯ್ಯ

ಶ್ರೀ ಎಸ್. ಎಸ್. ಬ್ಯಾಣದ, ಎಂ. ಎ., ಬಿ. ಇಡ್.




ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ

ಜನವರಿ, ೧೯೭೧

# ಮುನ್ನುಡಿ

ನಮ್ಮ ವಿಶ್ವವಿದ್ಯಾಲಯದ ವ್ಯಾಸಂಗ ವಿಸ್ತರಣ ವಿಭಾಗವು ಗ್ರಾಮಾಂತರ ಪ್ರದೇಶಗಳಲ್ಲಿ ಪ್ರತಿ ತಿಂಗಳು ಏರ್ಪಡಿಸುತ್ತಿರುವ ಉಪನ್ಯಾಸ ಶಿಬಿರಗಳು ದಿನೇ ದಿನೇ ಜನಪ್ರಿಯವಾಗುತ್ತ ಸಾಗಿರುವದು ನಿಜವಾಗಿಯೂ ಸಂತೋಷದ ಸಂಗತಿ. ಈ ಜ್ಞಾನಪ್ರಸಾರದ ಕಾರ್ಯದಲ್ಲಿ ಭಾಗವಹಿಸುವದರಿಂದ ವಿಶ್ವವಿದ್ಯಾಲಯದ ಹಾಗೂ ಕಾಲೇಜುಗಳ ಅಧ್ಯಾಪಕರಿಗೆ ಆಯಾ ಪ್ರದೇಶದ ಜನತೆಯೊಡನೆ ಹೆಚ್ಚಿನ ಸಂಪರ್ಕವೊದಗುವದಲ್ಲದೆ ಎಂಥ ವಿಷಯವನ್ನಾದರೂ ಕನ್ನಡದಲ್ಲಿ ತಿಳಿಸಿಹೇಳುವ ಹಾಗೂ ಅದನ್ನು ಸುಲಭವಾದ ಶೈಲಿಯಲ್ಲಿ ಬರವಣಿಗೆಯಲ್ಲಿಳಿಸುವ ಅವಕಾಶ ದೊರೆಯುತ್ತದೆ. ಈ ಕಾರ್ಯದಲ್ಲಿ ಅವರೆಲ್ಲರೂ ಮನಮುಟ್ಟಿ ಸಹಕರಿಸುತ್ತಿರುವದು ಶ್ಲಾಘನೀಯ.

ಈ ಮಾಲೆಯಲ್ಲಿ ಈಗಾಗಲೆ ನೂರಕ್ಕೂ ಮಿಕ್ಕಿ ಪುಸ್ತಕಗಳು ಪ್ರಕಟವಾಗಿವೆ. ಅಚ್ಚಾಗಿ ಹೊರಬಂದೊಡನೆ ಅವುಗಳ ಸಾವಿರಾರು ಪ್ರತಿಗಳನ್ನು ಜನರು ಕೊಂಡು ಓದುತ್ತಾರೆ. ಅನೇಕ ಪುಸ್ತಕಗಳು ಮೂರು-ನಾಲ್ಕು ಮುದ್ರಣಗಳನ್ನೂ ಕಂಡಿರುವುದು ಈ ಮಾಲೆಯ ಉಪಯುಕ್ತತೆಯನ್ನೂ, ಜನಪ್ರಿಯತೆಯನ್ನೂ ವ್ಯಕ್ತಗೊಳಿಸುತ್ತದೆ. ಇದು ನಾಡಿನ ಪ್ರಗತಿ ಚಿಹ್ನೆಯೆಂದು ಭಾವಿಸುತ್ತೇನೆ.

ವಿಶ್ವವಿದ್ಯಾಲಯ ಧನಸಹಾಯ ಆಯೋಗದವರು ಉ
ನ್ಯಾಸ ಶಿಬಿರಗಳಿಗೂ ಈ ಪುಸ್ತಿಕೆಗಳ ಪ್ರಕಟನೆಗೂ ನೆರ
ನೀಡುತ್ತಿದ್ದು ಅವರಿಗೆ ವಿಶ್ವವಿದ್ಯಾಲಯವು ತನ್ನ ಕೃತಜ್ಞ
ಗಳನ್ನು ಸೂಚಿಸುತ್ತದೆ.

ವಿಶ್ವವಿದ್ಯಾಲಯದ ಈ ಸೇವೆಯ ಸಂಪೂರ್ಣ ಪ್ರಯೋಜ
ಪಡೆದು ಸಾಮಾನ್ಯ ಜನತೆ ನಾಡಿನ ಸರ್ವತೋಮುಖವಾ
ಪ್ರಗತಿಯಲ್ಲಿ ಪಾಲುಗೊಳ್ಳಲೆಂದು ಹಾರೈಸುತ್ತೇನೆ.

ಕರ್ನಾಟಕ ವಿಶ್ವವಿದ್ಯಾಲಯ
ಧಾರವಾಡ
೧೫-೧-೧೯೬೧

ಎ. ಎಸ್. ಅಡ
ಕುಲಪತಿ

# ಅರಿಕೆ

ಕರ್ನಾಟಕ ವಿಶ್ವವಿದ್ಯಾಲಯದ ವ್ಯಾಸಂಗವಿಸ್ತರಣ ಸಮಿತಿಯು ಗಳಂನೆಯ ಉಪನ್ಯಾಸ ಶಿಬಿರ ತಾಳೀಕೋಟೆಯಲ್ಲಿ ಜರುಗಿತು. ಆಗ ನಾನು ಮಾತಾಡಿದ ವಿಷಯ 'ವಚನಕಾರ ದೇವರದಾಸಿಮಯ್ಯ'. ಅದರ ವಿಸ್ತೃತ ರೂಪವೇ ಈ ಪುಸ್ತಿಕೆ. ದೇವರದಾಸಿಮಯ್ಯನು ತಾಳೀಕೋಟೆಗೆ ಸಮೀಪದವನು; ಮುದನೂರಲ್ಲಿ ಅವನು ಹುಟ್ಟಿಬೆಳೆದು ಅಲ್ಲಿಯೇ ಜನಹಿತದ ಕಾರ್ಯ ಮಾಡಿದವನು. ಇವೆರಡು ದೃಷ್ಟಿಯನ್ನಿಟ್ಟುಕೊಂಡು ಈ ವಿಷಯ ಎತ್ತಿಕೊಂಡೆನು. ದೇವರದಾಸಿಮಯ್ಯನ ಬಗೆಗಿರುವ ಸಾಹಿತ್ಯವನ್ನು ನೋಡಿದರೆ ಅವನು ಸಾಮಾನ್ಯ ಶರಣನಾಗಿರಲಿಕ್ಕಿಲ್ಲವೆಂದು ತಿಳಿಯಬಹುದಾಗಿದೆ.

ಅವನು ವಚನಕಾರರಿಗೆ ಆದ್ಯಪ್ರವರ್ತಕ. ಅವನ ವಚನ-ಗಳು ಕಾವ್ಯಾಂಶದಿಂದ ತುಂಬಿತುಳುಕುತ್ತಿದ್ದು, ಚಿಕ್ಕವೂ, ಮನೋಹರವೂ ಆಗಿವೆ. ಆಗಿನ ವಿರೋಧ ಪರಿಸ್ಥಿತಿಯಲ್ಲಿಯೂ ವೀರಶೈವ ಧರ್ಮದ ಪ್ರಸಾರಕ್ಕೆ ಹೆಣಗಿದ ಧೀರ ಶರಣನು ದೇವರ ದಾಸಿಮಯ್ಯ. ಅವನು ವಾದಪಟು, ಶ್ರೇಷ್ಠ ವಾಗ್ಮಿ, ಮೇಲಾಗಿ ಧರ್ಮೋಪದೇಶಕ. ಆತನು ಕ್ರಾಂತಿಕಾರಿಯಾದ ಕೆಚ್ಚೆದೆಯ ಶರಣ. ಮುದನೂರಲ್ಲಿ ಅವನ ಇಷ್ಟದೇವತೆಯಾದ ರಾಮ-ನಾಥನ ದೇವಾಲಯವಿದೆ. ದೇವರದಾಸಿಮಯ್ಯನ ಕಾಲದಲ್ಲಿ

ಆ ಊರು ವೀರಶೈವ ಧರ್ಮದ ಕೇಂದ್ರವಾಗಿ ಮೆರೆಯಿತು. ಅಂತಹ ಮಹತ್ವ ಅದಕ್ಕೆ ಬರಲು ದೇವರದಾಸಿಮಯ್ಯನು ಮೂಲ ಕಾರಣನು.

ಈ ಪುಸ್ತಿಕೆಯಲ್ಲಿ ಎರಡು ಮುಖ್ಯ ಭಾಗ ಮಾಡಿದ್ದೇನೆ. ಒಂದು ಚರಿತ್ರೆಗೆ ಸಂಬಂಧಿಸಿದುದಾಗಿದೆ. ಇನ್ನೊಂದರಲ್ಲಿ ದೇವರದಾಸಿಮಯ್ಯನ ವಚನಗಳ ಸೌರಭವನ್ನು ಪ್ರಕಟಿಸಲು ಯತ್ನಿಸಲಾಗಿದೆ. ಹೀಗೆ ಮಾಡುವಾಗ ಮೂರು ಉದ್ಗ್ರಂಥ ಗಳ ಸಹಾಯ ಪಡೆದಿದ್ದೇನೆ. ಆ ಗ್ರಂಥಗಳ ಕರ್ತೃ ಹಾಗೂ ಸಂಪಾದಕರಿಗೆ ನಾನು ಋಣಿ.

ಈ ಚಿಕ್ಕ ಪುಸ್ತಕ ಬರೆಯಲು ನನ್ನನ್ನು ಪ್ರೋತ್ಸಾಹಿಸಿ ಅನೇಕ ಸೂಕ್ತ ಸಲಹೆಗಳನ್ನಿತ್ತ ನನ್ನ ಪೂಜ್ಯ ವಿದ್ಯಾಗುರು. ಗಳಾದ ಡಾ. ಎಂ. ಎಸ್. ಸುಂಕಾಪೂರ, ಎಂ. ಎ., ಪಿ. ಎಚ್. ಡಿ. ಅವರ ಉಪಕಾರವನ್ನು ನಾನಿಲ್ಲಿ ಮರೆಯಲಾರೆ. ಉಪನ್ಯಾಸ ಮಾಡಲು ಸದವಕಾಶವನ್ನಿತ್ತು ನಂತರ ಅದರ ವಿಷಯವನ್ನೇ ಪುಸ್ತಿಕೆಯ ರೂಪದಲ್ಲಿ ಪ್ರಕಟಿಸಲು ನೆರವಾದ ಕರ್ನಾಟಕ ವಿಶ್ವವಿದ್ಯಾಲಯದ ಅಧಿಕಾರಿಗಳಿಗೆ ನನ್ನ ಹೃತ್ಪೂರ್ವಕ ಕೃತಜ್ಞತೆಗಳು.

ಕಲಬುರಗಿ
ದಿ. ೨೮-೧-೬೧

ಎಸ್. ಎಸ್. ಬಾಣದ

# ವಿಷಯಸೂಚಿ




| | | ಪುಟ |
|---|---|---|
| | ಮುನ್ನುಡಿ | iii |
| | ಅರಿಕೆ | v |
| ೧ | ದೇವರದಾಸಿಮಯ್ಯನ ಚರಿತ್ರೆ | ೧—೧೮ |
| ೨ | ದೇವರದಾಸಿಮಯ್ಯನ ವಚನಗಳು | ೧೮—೬೮ |
| | ( i ) ವಚನಗಳ ಮಹತ್ವ | ೧೯—೨೨ |
| | ( ii ) ಪ್ರಾರ್ಥನಾಪರ ವಚನಗಳು | ೨೨—೨೬ |
| | ( iii ) ಜಗದೀಶ್ವರನ ಸ್ವರೂಪ | ೨೬—೩೦ |
| | ( iv ) ಶ್ರದ್ಧಾಭಕ್ತಿ | ೩೧—೩೬ |
| | ( v ) ದಾಸಿಮಯ್ಯನ ನೀತಿ | ೩೬—೩೮ |
| | ( vi ) ದಾಸಿಮಯ್ಯನ ದೃಷ್ಟಿಯಲ್ಲಿ ಸ್ತ್ರೀ | ೩೮—೪೨ |
| | (vii) ನಿಷ್ಠಾಪರತೆ | ೪೩—೪೭ |
| | (viii) ಸಾಮಾನ್ಯ ನೀತಿ | ೪೭—೫೧ |
| | ( ix ) ದಾಸಿಮಯ್ಯನ ಬೆಡಗು | ೫೧—೫೪ |
| | ( x ) ದಾಸಿಮಯ್ಯನ ವಚನಗಳಲ್ಲಿ ಪ್ರಾಣಿರೂಪಕ | ೫೪—೫೮ |
| | ( xi ) ದಾಸಿಮಯ್ಯನ ತತ್ತ್ವಜ್ಞಾನ | ೫೮—೬೧ |
| | ( xii ) ದಾಸಿಮಯ್ಯನ ವಚನಗಳ ಪ್ರಭಾವ | ೬೨—೬೪ |
| | (xiii) ದಾಸಿಮಯ್ಯನ ಶೈಲಿ | ೬೪—೬೯ |

# ವಚನಕಾರ ದೇವರದಾಸಿಮಯ್ಯ

## ದೇವರದಾಸಿಮಯ್ಯನ ಚರಿತ್ರೆ :

ಶಿವಶರಣರ ಪಂಕ್ತಿಯಲ್ಲಿ ಅಗ್ರಪೂಜೆಗೆ ಸಲ್ಲುವ ಶರಣರಲ್ಲಿ ದೇವರದಾಸಿಮಯ್ಯನೊಬ್ಬನು. ಇವನು ಬಸವಾದಿ ಪ್ರಮಥರಿಗಿಂತ ಹಲವಾರು ವರ್ಷ ಮೊದಲಿಗೆಯಿದ್ದವನು. ಭಕ್ತಿ ಭಂಡಾರಿ ಬಸವಣ್ಣನವರು ತಮ್ಮ ಅತ್ಯಮೂಲ್ಯವಾದ ವಚನಗಳಲ್ಲಿ

> "ಬಾಣ ಮಯೂರನಂತೆ ಬಣ್ಣಿಸ ಬಲ್ಲೆನೆ
> ಸಿರಿಯಾಳನಂತೆ ಉಣಲಿಕ್ಕ ಬಲ್ಲೆನೆ
> ದಾಸಿಮಯ್ಯನಂತೆ ಉಣಕೊಡ ಬಲ್ಲೆನೆ"

> "ದಾಸಿದೇವ ತನ್ನ ವಸ್ತ್ರವನಿತ್ತು ತವನಿಧಿಯ ಪ್ರಸಾದವ ಪಡೆದ"

> "....ದಾಸಯ್ಯ ಶಿವದಾಸವನೆರೆಯ ನೋಡಯ್ಯ"

> "ಭಕ್ತಿಯಿಲ್ಲದ ಬಡವನಾನಯ್ಯ
> ಕಕ್ಕಯನ ಮನೆಯಲ್ಲು ಬೇಡಿದೆ
> ದಾಸಯ್ಯನ ಮನೆಯಲ್ಲು ಬೇಡಿದೆ"

"ದೇವನಿಂತವನೆಂದು ತೋರಿಕೊಡುವೆನು ಗಣಂಗಳಿಗೆ
ಬಲ್ಲಾಳನ ವಧುವ ಬೇಡಿದಾತ ನೀದೇವಾ
ದಾಸನ ವಸ್ತ್ರವ ಬೇಡಿದಾತ ನೀದೇವಾ."

"ಅಯ್ಯಾ, ಜೇಡರ ದಾಸಯ್ಯಂಗೊಲಿದಾತ
ಮತ್ತೊಬ್ಬದೇವನೆ ಅಯ್ಯ"

"ದಾಸ ದುಗ್ಗಳೆಯರಂತೆ ನೆರೆನಂಬೋ, ನೆರೆನಂಬೋ"

ಹೀಗೆ ದೇವರದಾಸಿಮಯ್ಯನ ಮಹತ್ವವನ್ನು ಕೊಂಡಾಡಿದ್ದಾರೆ, ಹೃದಯತುಂಬಿ ಹಾಡಿದ್ದಾರೆ. ಮಹಾಶಿವಶರಣೆ ದುಗ್ಗಳೆಯ ಉಲ್ಲೇಖವೂ ಅವರ ವಚನಗಳಲ್ಲಿದೆ. ಅಲ್ಲದೆ ಮಹಾಕವಿ ಹರೀಶ್ವರನು ಪಂಪಾಶತಕದಲ್ಲಿ "....ದಾಸಿಮಯ್ಯಂ ಕುಡಲ್ ಉಡನೇ ಸೀರೆಯನ್...."ಎಂದೂ ಲಿಂಗಾರ್ಚನೆಯ ರಗಳೆಯಲ್ಲಿ "....ಕೇಶಿರಾಜನ ದುಗ್ಗಳೆಯ ದಾಸಿಮಯ್ಯನ ಭಕ್ತಿಯಿಂದಿಂತು ಪಾಡಲ್ಕೊಸೆದು...." ಎಂದು ಸ್ತುತಿಸಿದ್ದಾನೆ. ಬಸವಪುರಾಣದಲ್ಲಿ ಭೀಮಕವಿ (ಕ್ರಿ. ಶ. ೧೩೬೯) ಒಂದು ಸಂಪೂರ್ಣ ಸಂಧಿಯನ್ನು ದೇವರದಾಸಿಮಯ್ಯನಿಗೆ ಮೀಸಲಾಗಿರಿಸಿದ್ದಾನೆ! ಅಲ್ಲಿ ಅವನ ಶ್ರೇಷ್ಠ ಪವಾಡವನ್ನು ಮೆರೆಸಿದ್ದಾನೆ. ಇವರೆಲ್ಲರ ಹೊಗಳಿಕೆಗೆ ಪಾತ್ರನಾದ ದೇವರದಾಸಿಮಯ್ಯನು ಮಹಾಶರಣನಾಗಿರಬೇಕು. ಹೃದ್ಯವಚನಕಾರನೂ ಹೌದು. ಇವನ ರಸವತ್ತಾದ ವಚನಗಳ ಪ್ರಭಾವ ನಂತರದಲ್ಲಿ ಆಗಿಹೋದ ಶಿವಶರಣರ ವಚನಗಳ ಮೇಲೆ ಗಾಢವಾಗಿದೆಯೆಂಬುದನ್ನು ಅವರ ವಚನಗಳ ಆಧಾರದಿಂದ ಹೇಳಲು ಬರುತ್ತದೆ.

ದೇವರ ದಾಸಿಮಯ್ಯನು ಕನ್ನಡದ ತಿರುವಳ್ಳುವರ್. ಶರಣೆ ದುಗ್ಗಳೆ ಆವನಿಗೆ ತಕ್ಕ ಸತಿಯಾಗಿದ್ದಳು. ಒಮ್ಮೆ ಸಂಸಾರಿ ಸನ್ಯಾಸಿಗಳಿಬ್ಬರಲ್ಲಿ ಸಂಸಾರ ಮಿಗಿಲೋ ಸನ್ಯಾಸ ಮಿಗಿಲೋ ಎಂಬುದರ ಒಗ್ಗೆ ವಾದ-ವಿವಾದ ನಡೆಯಿತಂತೆ. ದೇವರ ದಾಸಿ ಮಯ್ಯನು ಇದನ್ನು ಬಗೆಹರಿಸಬಲ್ಲನೆಂಬುದನ್ನರಿತ ಅವರು ಅವ ನೆಡೆಗೆ ಬಂದು ಪ್ರಶ್ನಿಸುತ್ತಾರೆ. ಆಗ ದೇವರದಾಸಿಮಯ್ಯನು ಹೆಂಡತಿಗೆ ಮೂರು ದಿನಗಳ ಹಿಂದೆ ಮಾಡಿದ ಅಂಬಲಿ ತರಲು ಹೇಳಿ ಅದನ್ನು ತಂದ ಬಳಿಕ ಆರಲೆಂದು ಗಾಳಿಹಾಕಲು ತಿಳಿ ಸಿದನು. ಅದಕ್ಕೆ ಮರುಮಾತಾಡದೆ ಆ ಸಾಧ್ವಿ ಗಾಳಿ ಬೀಸಿದ ಳಂತೆ. ಹುರಿದ ಎಳೆಯನ್ನು ಜೋಡಿಸಲು ಸಾಕಷ್ಟು ಪ್ರಕಾಶ ವಿದ್ದರೂ ದೀಪ ತರಲು ಆಜ್ಞಾಪಿಸಲು ಅಂತೆಯೇ ಮಾಡಿದಳು ದುಗ್ಗಳೆ. ಕೈಗೆ ನಿಲುಕುತ್ತಿದ್ದರೂ ಕುಂಚಿಗೆ ಕೊಡಲು ನಿರೂ ಪಿಸಲು ತಕ್ಷಣ ಅದನ್ನು ಕೊಟ್ಟಳು. ಅಲ್ಲಿಯೇ ಇದ್ದು ಅದನ್ನು ನೋಡಿದ ಅವರಿಬ್ಬರಿಗೆ ಉತ್ತರ ದೊರೆಯಿತು. ಇಂತು ಸತಿ ಯಿದ್ದರೆ, ಸಂಸಾರ ಮಿಗಿಲು, ಇದಕ್ಕೆ ವಿರೋಧವಾಗಿದ್ದರೆ ಸನ್ಯಾಸ ಮಿಗಿಲೆಂಬುದನ್ನು ಪ್ರತ್ಯಕ್ಷ ತೋರಿಸಿಕೊಟ್ಟ ಕುಶಲ ಗಾರ.

ಈ ಮಹಾಮಹಿಮ ಕನ್ನಡನಾಡಿನಲ್ಲಿ ೧೧ನೆಯ ಶತಮಾನದ ಮಧ್ಯಭಾಗದಲ್ಲಿದ್ದನು. ೧೦-೧೧ನೆಯ ಶತಮಾನಗಳು ನಮ್ಮ ನಾಡಿನಲ್ಲಿ ಮತ-ಮತ, ಧರ್ಮ-ಧರ್ಮಗಳ ನಡುವೆ ನಡೆದ ಹೋರಾಟದ ಕಾಲವಾಗಿದ್ದವು, ಸ್ಪರ್ಧೆಯ ಸಮಯವಾಗಿದ್ದುವು. ಪ್ರತಿಯೊಬ್ಬನೂ ತನ್ನ ತನ್ನ ಮತ-ಧರ್ಮಗಳ ಪ್ರಸಾರ

ವನ್ನೂ, ಪ್ರಚಾರವನ್ನೂ, ತುರುಸಿನಿಂದ ಮಾಡುತ್ತಿದ್ದ ಕಾಲ ವದು. ಜೈನರ ಪ್ರಾಬಲ್ಯ ಅಧಿಕವಾಗಿತ್ತು ಆಗ. ರಾಜಕೀಯ ಹೋರಾಟಕ್ಕಿಂತ ಧಾರ್ಮಿಕ ಏರಾಟ, ಸ್ಪರ್ಧೆ ಹಿರಿಗಿಲಾಗಿದ್ದ ಕಾಲವದು. ಅರಸರು, ಮಂತ್ರಿಗಳು, ಉನ್ನತಾಧಿಕಾರಿಗಳು ಜೈನಮತದವರೇ ವಿಶೇಷವಾಗಿದ್ದರು. ಉಳಿದ ಮತದವರಿಗೆ ಯಾವ ಆಶ್ರಯಗಳಾಗಲಿ ಅರಸರ, ಅಧಿಕಾರಿಗಳ ಬೆಂಬಲ ವಾಗಲಿ ವಿಶೇಷವಿದ್ದಿಲ್ಲ. ಇಂತಹ ವಿರೋಧ ಪರಿಸ್ಥಿತಿಯಲ್ಲಿಯೂ ವೀರಶೈವ ಧರ್ಮಪ್ರಸಾರಕ್ಕೆ ಟೊಂಕಕಟ್ಟಿ ನಿಂತನು. ದೇವರ ದಾಸಿಮಯ್ಯನು ಶಾಸ್ತ್ರಾಧಾರಗಳಿಂದ ಅನ್ಯ ಮತಗಳ ಖಂಡನೆ ಮಾಡಿ ವೀರಶೈವ ಧರ್ಮ ಹಿರಿಗಿಲೆಂಬುವನ್ನು ಮನವರಿಕೆ ಮಾಡಿಕೊಟ್ಟನು. ಆದರ ಪರಿಣಾಮವಾಗಿ ಬೇರೆ ಮತದವರು ವೀರಶೈವ ಧರ್ಮವನ್ನು ಸ್ವೀಕರಿಸುವಂತಾಯಿತು. ಇಂತಹ ಧೀರ ಶರಣನು ಜನಿಸಿದ ಸ್ಥಳ ಮುದನೂರು. (ಆನೋದಪುರ) ಅದು ಕಲುಬುರ್ಗಿ ಜಿಲ್ಲೆಯ ಸುರಪೂರ ತಾಲೂಕಿನಲ್ಲಿದೆ. ಶರಣಭೋಗಯ್ಯನ ಊರಾದ ಕೆಂಭಾವಿ (ಅದು ಸುರಪೂರ ತಾಲೂಕಿನಲ್ಲಿದೆ) ಅಲ್ಲಿಂದ ಮೂರು ಮೈಲಿನಂತರದಲ್ಲಿದೆ. ಶರಣರಡಿಯಿಟ್ಟು ಹೋದ ಈ ಭೂಮಿ ಪುಣ್ಯಕ್ಷೇತ್ರವಾಗಿದೆ. ಆ ಪವಿತ್ರ ಗ್ರಾಮದಲ್ಲಿ ಪುಣ್ಯಜೀವಿಗಳಾದ ಶಂಕರಿ ಮತ್ತು ರಾಮಯ್ಯ ವಾಸಿಸುತ್ತಿದ್ದರು. ಧೀರ ಶರಣನಾದ ದೇವರ ದಾಸಿಮಯ್ಯನಿಗೆ ತಾಯಿ-ತಂದೆಯರಾಗುವ ಭಾಗ್ಯ ಅವರ ದಾಯಿತು. ದೇವರದಾಸಿಮಯ್ಯನು ತನ್ನ ಬಾಲ್ಯವನ್ನು ಆ ಗ್ರಾಮದಲ್ಲಿಯೇ ಕಳೆಯುವನು. ಮುದನೂರು ಪುರಾತನ

ವಾದುದು. ಅಲ್ಲಿರುವ ಕೆಲವು ಪ್ರಾಚೀನ ದೇವಾಲಯಗಳ ಅವಶೇಷಗಳೇ ಇದಕ್ಕೆ ನಿದರ್ಶನ. ಆ ದೇವಾಲಯಗಳಲ್ಲೆಲ್ಲ ರಾಮನಾಥ ದೇವಾಲಯವೇ ಮುಖ್ಯವಾದುದು. ದೇವರ ದಾಸಿಮಯ್ಯನ ಇಷ್ಟದೇವನೇ ರಾಮನಾಥನು. ನಿತ್ಯ ಅವನಲ್ಲಿಗೆ ಆ ಮಗು ಪೂಜೆಗೆ ಹೋಗುತ್ತಿತ್ತು. ಈ ರೀತಿಯಲ್ಲಿ ಬೆಳೆಯುತ್ತಿದ್ದ ದೇವರದಾಸಿಮಯ್ಯನಿಗೆ ಶಿವಜ್ಞಾನವನ್ನು ಹೆಚ್ಚಿಸಿಕೊಳ್ಳಬೇಕೆಂಬ ಲವಲವಿಕೆ ಬೆಳೆಯುವುದು. ಈ ದಾಹವನ್ನು ಅಡಗಿಸಿಕೊಳ್ಳುವ ಸದುದ್ದೇಶದಿಂದ ಪ್ರೇರಿತನಾಗಿ ಆಗಿನ ಧಾರ್ಮಿಕ ಕೇಂದ್ರಗಳಲ್ಲಿ ಒಂದಾದ ಶ್ರೀಶೈಲಕ್ಕೆ ನಡೆದನು. ಅದು ನಿಸರ್ಗರಮಣೀಯತೆಯಿಂದ ತುಂಬಿದುದು; ಮನೋಜ್ಞವಾದುದು. ಅಲ್ಲಿಯ ಪುಣ್ಯಸ್ಥಳಗಳ ದರ್ಶನ ಪಡೆದು ನಂತರ ಬಿಲ್ವವನ್ನು ಪ್ರವೇಶಿಸಿ ಶಿವಧ್ಯಾನದಲ್ಲಿರತೊಡಗಿದನು. ಅವನಲ್ಲಿ ನಿಷ್ಠೆ ಬೆಳೆಯಿತು. ಪರಮಾತ್ಮನು ಪ್ರತ್ಯಕ್ಷನಾದನು. ಭಕ್ತನ ಇಷ್ಟವನ್ನು ನೆರವೇರಿಸಲು ಅಭಯ ನೀಡಿದನು. ಶ್ರೀಶೈಲ ಮಠದ ಹಿರಿಯ ಗುರುಗಳನ್ನು ಕಾಣಲು ಆಜ್ಞಾಪಿಸಿದನು. ಚಂದ್ರಗುಂಡದೇಶಿಕೇಂದ್ರರು ಆಗಿನ ಸಿಂಹಾಸನಾಧೀಶರಾಗಿದ್ದರು. ಅವರಿಂದ ಲಿಂಗದೀಕ್ಷೆಯನ್ನು ಪಡೆದನು. ಕ್ರಮವಾಗಿ ಶಾಸ್ತ್ರಗಳ ಅಭ್ಯಾಸಮಾಡಿ ಪಾರಂಗತನಾದನು. ಶಿಷ್ಯನ ಪರಿಸ್ಥಿತಿಯನ್ನರಿತು ಚಂದ್ರಗುಂಡದೇಶಿಕೇಂದ್ರರು ವೀರಶೈವ ಧರ್ಮಪ್ರಚಾರ ಕೈಕೊಳ್ಳಲು ನಿರೂಪಿಸಿದರು. ಅದಕ್ಕೊಪ್ಪಿದ ದೇವರದಾಸಿಮಯ್ಯನು ಗುರುಗಳಿಂದ ಅಪ್ಪಣೆ ಪಡೆದು ಸ್ವಗ್ರಾಮದ ಕಡೆಗೆ ನಡೆದನು.

ಶ್ರೀಶೈಲದ ದಟ್ಟ ಕಾಡಿನಲ್ಲಿ ಕಾಡುಜನರು ಗುಂಪು ಕಟ್ಟಿಕೊಂಡು ಇದ್ದರು. ಹಿಂಸೆಯಿಂದ ಜೀವಿಸುವುದೇ ಅವರ ಜೀವನವಾಗಿತ್ತು. ಅವರಿಗಾಗಿ ದೇವರದಾಸಿಮಯ್ಯನು ಮರುಗಿದನು. ಆ ವೃತ್ತಿಯನ್ನು ತ್ಯಜಿಸಲು ಬೋಧಿಸಿದನು. "ಈ ಸೃಷ್ಟಿ ಪರಮಾತ್ಮನಿಂದ ಭರಿತವಾದುದು, ಪ್ರಾಣಿಗಳ ವಧೆ ತರವಲ್ಲ" ಎಂಬ ಉಪದೇಶದ ಪರಿಣಾಮ ಅವರನ್ನು ಸನ್ಮಾರ್ಗಿಗಳನ್ನಾಗಿ ಪರಿವರ್ತಿಸಿತು. ಲಿಂಗಧಾರಿಗಳಾದರು. ಎಣ್ಣೆ ತೆಗೆಯುವ ಕಾಯಕದಲ್ಲಿ ತೊಡಗಿದರು. ಶ್ರೀಶೈಲದೊಡೆಯನಿಗೆ ಎಣ್ಣೆ ಕಾಣ್ಕೆಯನ್ನು ಪ್ರತಿವರ್ಷ ಅರ್ಪಿಸಲು ಒಪ್ಪಿ ಅಂತೆಗೈದರು.

ಅಲ್ಲಿಂದ ದೇವರದಾಸಿಮಯ್ಯನು ನಂದಿ ಗ್ರಾಮಕ್ಕೆ ಪ್ರಯಾಣ ಬೆಳಸಿದನು. ಅಲ್ಲಿದ್ದ ಅನ್ಯಮತದವರು ಶಿವವನ್ನು ನಿಂದಿಸಿದರು. ತಮ್ಮ ಮತದಲ್ಲಿ ಸೇರಲು ಕೇಳಿದರು. ಅವ-ರಿಗೆಲ್ಲ ಸಮರ್ಪಕವಾಗಿ ಉತ್ತರಿಸಿ ಬಾಯಿ ಕಟ್ಟುವಂತೆ ಮಾಡಿ-ದನು. 'ಶಿವನು ಸರ್ವವ್ಯಾಪಕನಾದವನೆಂದು' ಅನ್ನಲು 'ಮೂತ್ರ ಎಲ್ಲಿ ಮಾಡುವಿ'ರೆಂದು ಅವರು ಪ್ರಶ್ನಿಸಿದರು. ಶಿವನು ಇಲ್ಲವೆಂದು ಹೇಳುವ ನಿಮ್ಮ ನಾಲಿಗೆಯ ಮೇಲೆಂದು ನಿಷ್ಠುರ ಉತ್ತರ ಕೊಟ್ಟನು. ಅಲ್ಲಿದ್ದ ಮುಕುಂದ ದೇವಾಲಯ ಶಿವ-ದೇವಾಲಯವಾಯಿತು ದೇವರ ದಾಸಿಮಯ್ಯನ ಪ್ರಭಾವ ದಿಂದ. ಅವರಿಗೆಲ್ಲ ಶಿವದೀಕ್ಷೆಯನ್ನು ಕರುಣಿಸಿದನು. ಈ ದೇವಾಲಯವು ನಂತರ ರಾಮೇಶ್ವರ ಗುಡಿಯೆಂದು ಪ್ರಸಿದ್ಧ ವಾಯಿತು.

ಮಾನವಕೋಟಿಯ ಕಲ್ಯಾಣಕ್ಕಾಗಿ ದೇವರದಾಸಿಮಯ್ಯನ ಪ್ರಯಾಣ ಮುಂದುವರೆಯಿತು. ಒಕ್ಕಲುತನದಿಂದ ಶ್ರೀಮಂತ ನಾಗಿದ್ದ ಮುದ್ದಯ್ಯನೆಂಬವನಿದ್ದ ಗೌಡಗೆರೆಗೆ ಬಂದನು. ದೇವರದಾಸಿಮಯ್ಯನಲ್ಲಿ ಭಕ್ತಿಯಿರಿಸಿದನು ಮುದ್ದಯ್ಯನು. ಅವನ ಸಂಬಂಧಿಕರನೇಕರು, ಇನ್ನುಳಿದವರು ದೇವರದಾಸಿ ಮಯ್ಯನ ಉಪದೇಶಕ್ಕೆ ಪ್ರಭಾವಿತರಾಗಿ ವೀರಶೈವ ದೀಕ್ಷೆ ಯನ್ನು ಪಡೆದರು. ಶ್ರೀಶೈಲದೊಡೆಯನಿಗೆ ಭಕ್ತರಾಗಿ ನಡೆದು ಕೊಳ್ಳುವಂತೆ ಅವರಿಗೆಲ್ಲ ಬೋಧಿಸಿದನು. ಮಲ್ಲಿಕಾರ್ಜುನನ ಭಕ್ತರಾಗಿ ಅವರೆಲ್ಲ ಕಾಲ ಕಳೆಯತೊಡಗಿದರು. ತಮ್ಮ ಕಾಯಕ ದಲ್ಲಿ ಅಭಿವೃದ್ಧಿ ಹೊಂದಿದರು.

ಆಗಿನ ಕಾಲದ ಪ್ರಸಿದ್ಧನಗರಗಳಲ್ಲಿ ಒಂದಾದ ಪೊಟಲ ಕೆರೆಗೆ ಆಗಮಿಸುತ್ತಾನೆ ದೇವರದಾಸಿಮಯ್ಯ. ಅಲ್ಲಿ ನೇಯ್ಗೆ ಕಾಯಕದ ದೇವಾಂಗ ಸಮಾಜದವರು ವಿಶೇಷವಾಗಿದ್ದರು. ಅವರನ್ನೆಲ್ಲ ತನ್ನಡೆಗೆ ಬರಮಾಡಿಕೊಂಡು ಭಕ್ತರಾಗಿ ಜೀವನ ಕಳೆಯಬೇಕೆಂದು ಉಪದೇಶಿಸಿದನು. ಹಲವುಕಾಲ ಆ ಪುರ ದಲ್ಲಿಯೇ ಇದ್ದು ಪ್ರವಚನಮಾಡಿ ವೀರಶೈವ ಧರ್ಮದ ಮಹಿಮೆ ಯನ್ನು ಸಾರಿದನು. ಆ ನಗರದವರು ದೇವರದಾಸಿಮಯ್ಯನಿಗೆ ಮಠವನ್ನು ಕಟ್ಟಿಸಿಕೊಟ್ಟರು.

ಈ ನಗರ ಮುಂದೆ ಚಾಲುಕ್ಯ ಅರಸನಾದ ಜಯಸಿಂಹನ (ಕ್ರಿ. ಶ. ೧೦೦೮-೧೦೪೦) ರಾಜಧಾನಿಯಾಯಿತು. ಅಲ್ಲಿ ಆಗ ೭೦೦ ಜೈನ ಬಸದಿಗಳು ಇದ್ದವು. ೨೦ ಸಾವಿರ ಜೈನ ರಿದ್ದರು. ಇನ್ನುಳಿದ ಧರ್ಮದವರು ಅಧಿಕ ಸಂಖ್ಯೆಯಲ್ಲಿದ್ದರು.

ಅರಸನು ಜೈನಮತದವನು. ಅರಸನ ಧರ್ಮಪತ್ನಿ ಸುಗ್ಗಲಾದೇವಿ ಶಿವಭಕ್ತೆ. ಆಕೆಯ ತವರಮನೆಯವರೂ ಶಿವಭಕ್ತಿಯುಳ್ಳವರು. ಈಕೆಯಲ್ಲಿ ಶಿವಭಕ್ತಿ ಬೆಳೆಯುತ್ತಹೋಗುವುದು. ಗುಪ್ತರೀತಿಯಿಂದ ಅದನ್ನಾಚರಿಸುತ್ತಲೇ ಇದ್ದಳು. ಕಾಲಕ್ರಮೇಣ ಶಿವದೀಕ್ಷೆಯನ್ನು ಹೊಂದುವ ಹಂಬಲ ಬೆಳೆಯಿತು. ಹೆಸರುವಾಸಿಯಾದ ದೇವರದಾಸಿಮಯ್ಯನನ್ನು ಕರೆಯಿಸಿಕೊಂಡು ಲಿಂಗದೀಕ್ಷೆಯನ್ನು ಪಡೆಯುವಳು. ಇದನ್ನರಿತ ಪರಮತದವರು ಅರಸನಿಗೆ ದೂರು ಹೇಳುವರು. ಸುಗ್ಗಲೆಯ ಮೇಲೆ ರಾಜನು ಕೋಪಗೊಳ್ಳುವನು. ಹೆಂಡತಿಗೆ ತಿಳಿ ಹೇಳುವನು. ಅವಳು ಅರಸನ ಮಾತನ್ನು ಕೇಳುವದಿಲ್ಲ. ತಾನು ಹಿಡಿದ ಶಿವಧರ್ಮವನ್ನು ಬಿಡುವದಿಲ್ಲ. ಸುಗ್ಗಲಾದೇವಿಯ ನಿಶ್ಚಯವನ್ನು ತಿಳಿದ ಎಲ್ಲರೂ ಆಶ್ಚರ್ಯ ಹೊಂದುವರು. ಇದಕ್ಕೆಲ್ಲ ಕಾರಣನಾದ ದೇವರದಾಸಿಮಯ್ಯನನ್ನು ರಾಜಸಭೆಯಲ್ಲಿ ಕರೆಸಿ ಶಾಸ್ತ್ರದಲ್ಲಿ ಅವನನ್ನು ಸೋಲಿಸಿ ಅವಮಾನಿತನನ್ನಾಗಿ ಮಾಡಿ ವಧಿಸಬೇಕೆಂದು ನಿರ್ಧರಿಸುವರು.

ಮರುದಿನ ಸಭೆ ಸೇರುವುದು. ಆ ನಗರದ ವಿದ್ವಾಂಸರೆಲ್ಲ ಅಲ್ಲಿ ಸೇರುವರು. ಆಯಾ ಮತಗಳಲ್ಲಿ ಉನ್ನತಿ ಪಡೆದವರೆಲ್ಲ ಆಗಮಿಸುವರು. ತುಂಬಿದ ರಾಜಸಭೆಗೆ ತೇಜೋನಿಧಿಯಾದ ದೇವರದಾಸಿಮಯ್ಯನು ಬರುವನು. ಸಭಿಕರೆಲ್ಲರ ದೃಷ್ಟಿಗಳನ್ನು ಸೆಳೆಯುವನು. ಜಗದ್ರಕ್ಷಕನೂ, ಜಗದಾಧಾರನೂ ಯಾರೆಂಬ ಬಗೆಗೆ ಪಂಡಿತರಲ್ಲಿ ವಾದ ಪ್ರಾರಂಭವಾಗುವುದು. ಹಲವರು ನಾನಾ ವಿಧವಾಗಿ ಹೇಳುವರು. ದಾಸಿಮಯ್ಯನು

ಅವರೆಲ್ಲರ ಗೊಳ್ಳು ವಾದವನ್ನು ತಳ್ಳಿಹಾಕಿ, ಜಗದಾಧಾರನು ಪರಶಿವನಲ್ಲದೆ ಮತ್ತಾರೂ ಅಲ್ಲವೆಂದು ಶಾಸ್ತ್ರಾಧಾರಗಳಿಂದ ತಿಳಿಸಿಕೊಡುವನು. ಪಂಡಿತರ, ಪರಿಣತರ ವಾದಗಳನ್ನು ಖಂಡಿಸುವನು. ಜಗತ್ತಿಗೆಲ್ಲ ಎತ್ತನ್ನೇರಿದ ಕರ್ತನೊಬ್ಬನೆಂದೂ ಎತ್ತು ಬೆಳೆದಂಥ ಧಾನ್ಯವನ್ನು ಉಣ್ಣುವ ದೇವತೆಗಳೆಲ್ಲ ಆತನ ತೊತ್ತಿನ ಮಕ್ಕಳೆಂದೂ ಶಿವಾದ್ವೈತ ತತ್ವವನ್ನು ಪ್ರತಿಪಾದಿಸಿದನು. ಅನ್ಯ ಮತದವರು ವಾದದಲ್ಲಿ ದೇವರದಾಸಿಮಯ್ಯನನ್ನು ಸೋಲಿಸಲಾಗಲಿಲ್ಲ. ಕಾರಣ ಮೋಸದ ಕೃತಿಗಳನ್ನು ಮಾಡಲು ಮುಂದಾದರು. ಅವನಿಗೆ ವಿಷಮಿಶ್ರಿತ ನೀರನ್ನು ಕುಡಿಯಲು ಕೊಡುವರು. ಅವರ ನೀಚ-ಕೃತ್ಯವನ್ನು ಅರಿತ ದೇವರ ದಾಸಿಮಯ್ಯನು ಲಿಂಗಕ್ಕೆ ಅದನ್ನು ತೋರಿಸಿ ಪರಮಾತ್ಮ ಸ್ತೋತ್ರ ಮಾಡುತ್ತ ಕುಡಿದನು. ವಿಷ ಅಮೃತವಾಗಿ ಪರಿಣಮಿಸಿತು. ಇನ್ನೊಮ್ಮೆ ಒಬ್ಬ ಬಾಲಕನನ್ನು ಮರದ ಹೊದರಿನಲ್ಲಿರಿಸಿ ದೇವರದಾಸಿಮಯ್ಯನನ್ನು ಕರೆಸಿ "ಜಿನನನ್ನು ಇಲ್ಲಿ ತೋರಿಸುತ್ತೇವೆ." "ನೀನು ನಿನ್ನ ಶಿವನನ್ನು ತೋರಿಸಬಲ್ಲೆಯಾ" ಎಂದು ಹೇಳಿ ಕೂಗುವರು. ಮಗುವಿನಿಂದ ಉತ್ತರಬಾರದಾಗುವುದು. ಹೋಗಿ ನೋಡಲು ಮಗು ಗತಪ್ರಾಣನಾಗಿದ್ದನು. ಮಗುವಿನ ತಾಯಿಯು ಮರುಕವನ್ನು ಕಂಡು ಮಗು ಜೀವಿಸಲೆಂದು ಪ್ರಾರ್ಥಿಸಿದನು. ಆ ಮಗು ಎದ್ದು ಬರುವನು. ಮತ್ತೊಮ್ಮೆ ಉಗ್ರ ಸರ್ಪವನ್ನು ಕೊಡದಲ್ಲಿಟ್ಟು "ಇಲ್ಲಿ ನಿನ್ನ ಸರ್ವವ್ಯಾಪಿಯಾದ ಶಿವನನ್ನು ತೋರಿಸುವೆಯಾ ?" ಎಂದೆನ್ನಲು ಅದಕ್ಕೊಪ್ಪಿ ಅಂಜದೆ, ಅಳುಕದೆ

ಆ ಸರ್ಪವನ್ನು ಹಿಡಿಯುವನು. ಆ ವ್ಯಕ್ತಿಯ ಸ್ಪರ್ಶ ವಿಶೇಷದಿಂದ ಅದು ಸ್ಫಟಿಕ ಲಿಂಗವಾಯಿತು. ಅದಕ್ಕೆ ಉತ್ತರನಾಥನೆಂದು ಹೆಸರಿಟ್ಟನು. ಅಲ್ಲಿಯೇ ಅದನ್ನು ಪ್ರತಿಸ್ಠಾಪಿಸಿದನು. ಅವನ ಲಿಂಗಭಕ್ತಿ ಅದ್ಭುತವಾದುದೆಂಬುದನ್ನರಿತ ಅರಸನು ವೀರಶೈವ ದೀಕ್ಷೆಯನ್ನು ಪಡೆದನು. ಅವನ ಇಪ್ಪತ್ತು ಸಾವಿರ ಅನುಯಾಯಿಗಳು ವೀರಶೈವರಾದರು.

ಜನಹಿತ ಕಾರ್ಯ ಮಾಡುತ್ತ ದೇವರದಾಸಿಮಯ್ಯನು ಮರಳಿ ತನ್ನ ಊರಾದ ಮುದನೂರಿಗೆ ಬಂದನು. ಅಲ್ಲಿ ನೇಯ್ಗೆ ಕಾಯಕದಲ್ಲಿ ನಿರತನಾದನು. ಬಯಸಿ ಬಂದವರಿಗೆಲ್ಲ ಶಿವನ ಅಗಾಧಮಹಿಮೆಯನ್ನು ಹೇಳತೊಡಗಿದನು. ಅವನ ಪ್ರವಚನಕ್ಕೆ ಪ್ರಭಾವಿತರಾಗದವರು ವಿರಳ. ದಾಸಿ-ಮಯ್ಯ ಇಲ್ಲಿಯವರೆಗೆ ಆಚಾರ ಪದ್ಧತಿಯಂತೆ ವೈರಾಗ್ಯವನ್ನು ಆಚರಿಸುತ್ತ ಬಂದಿದ್ದನು. ಗೃಹಸ್ಥನಾಗಲು ಬಯಸಿದನು. ಅನುರೂಪಳಾದ ಕನ್ನೆಗಾಗಿ ಹುಡುಕತೊಡಗಿದನು. ಗೃಹಸ್ಥ ಜೀವನ ಅನಿವಾರ್ಯವಾದುದು; ಅದು ತ್ಯಕ್ತವಲ್ಲ ” ಅಂತೆಯೇ ತನ್ನ ಸತಿಗಾಗಿ ಅಲೆದಾಡಿ ಗೊಬ್ಬೂರಿಗೆ ಬರುವನು. ಅಲ್ಲಿ ಶಿವಜೀವಿಗಳಾದ ಮಲ್ಲಿನಾಥ ಮತ್ತು ಮಹಾದೇವಿಯೆಂಬ ದಂಪತಿಗಳಿದ್ದರು. ಅವರಿಗೆ ದುಗ್ಗಳೆ ಮಗಳು. ಅತ್ಯಂತ ಭಕ್ತಿಯುಳ್ಳವಳು. ದೇವರ ದಾಸಿಮಯ್ಯನು ಗೊಬ್ಬೂರಿಗೆ ಬಂದಾಗ ಅವರು ಶಿವಪುರದಲ್ಲಿರುವುದು ತಿಳಿಯಿತು. ಅಲ್ಲಿಗೆ ತೆರಳಿದನು. ಮಳಲು ಮಿಶ್ರಿತ ಅಕ್ಕಿ, ಕಬ್ಬುಗಳನ್ನು ಕೊಟ್ಟು [illegible]ಂದ ಅನ್ನ ಮಾಡಲು ದುಗ್ಗಳೆಗೆ ಕೇಳಿದನು. ಅದು

ಸಾಮಾನ್ಯ ಪರೀಕ್ಷೆಯಾಗಿರಲಿಲ್ಲ. ದೇವರ ದಾಸಿಮಯ್ಯನನ್ನು ಅಳಿಯನನ್ನಾಗಿ ಸ್ವೀಕರಿಸಲು ದಂಪತಿಗಳಿಗೆ ಬಯಕೆ. ಅವನ ಕೀರ್ತಿಕೇಳಿ ಹರ್ಷಿತರಾದವರು. ನಿಷ್ಠಾವಂತಳಾದ ದುಗ್ಗಳೆಯು ದೇವರ ದಾಸಿಮಯ್ಯನ ಪಾದೋದಕ ಪಡೆದು ಅವುಗಳ ಮೇಲೆ ಸಿಂಪಡಿಸಿದಳು. ಇನ್ನಷ್ಟು ಕಬ್ಬು ತರಿಸಿ ಅವನ್ನೂ ಹಿಂಡಿದಳು. ಮಳಲಿನಿಂದ ಅಕ್ಕಿಯನ್ನು ಬೇರೆ ಮಾಡಿದಳು. ಸಿಪ್ಪೆ ಉರುವಲಾಯಿತು. ಅನ್ನವಾಯಿತು ದೇವರದಾಸಿಮಯ್ಯನ ಪರೀಕ್ಷೆಯಲ್ಲಿ ದುಗ್ಗಳೆ ತೇರ್ಗಡೆಯಾದಳು. "ದುಗ್ಗಳೆ ಸಾಮಾನ್ಯಳಲ್ಲ, ಪ್ರಜ್ಞಾವಂತಳು. ತನಗೆ ತಕ್ಕ ಸತಿಯಾಗಲು ಯೋಗ್ಯಳು," ಎಂದು ಪತ್ನಿಯನ್ನಾಗಿ ಸ್ವೀಕರಿಸಿದನು. ದುಗ್ಗಳೆಯು ಶಿವ ಶರಣೆಯರಲ್ಲಿ ಪ್ರಸಿದ್ಧಳಾಗಿದ್ದಾಳೆ. ಭಕ್ತಿಭಂಡಾರಿ ಬಸವಣ್ಣನವರು ದುಗ್ಗಳೆಯನ್ನು ಕೊಂಡಾಡಿದ್ದಾರೆ. ದುಗ್ಗಳೆ ಪತಿ ಭಕ್ತಿಯಲ್ಲಿ ಹೆಸರುವಾಸಿಯಾಗಿದ್ದಾಳೆ.

ವಿವಾಹಿತರಾದ ಅವರು ಮುದನೂರಿಗೆ ಬಂದರು. ದೇವರ ದಾಸಿಮಯ್ಯನು ಪವಿತ್ರವಾದ ನೇಯ್ಗೆಯ ಕಾಯಕದಲ್ಲಿ ನಿರತನಾದನು. ನಿತ್ಯ ಶಿವಾನುಭವ ತತ್ತ್ವಗಳನ್ನು ಬೋಧಿಸ ತೊಡಗಿದನು. ಸತ್ಯಶುದ್ಧ ಕಾಯಕದಿಂದ ದೊರೆತಷ್ಟರಿಂದ ತೃಪ್ತಿಪಡೆಯುತ್ತಿದ್ದನು. ಗುರು, ಲಿಂಗ, ಜಂಗಮ ಸೇವೆಯಲ್ಲಿ ಆನಂದಪಡೆಯುತ್ತಿದ್ದನು. ದಾಸೋಹ ನಡೆಸಿದನು. ಹೀಗಿರಲು ಒಂದು ಅಗಾಧ ವಸ್ತ್ರವನ್ನು ನೇಯ್ದನು. ಅದನ್ನು ಮಾರಲು ಸಿದ್ಧಾಪುರದ ಸಂತೆಗೆ ಹೋದನು. ಅದರ ಸೌಂದರ್ಯಕ್ಕೆ ಮಾರುಹೋಗದವರು ಯಾರೂ ಉಳಿಯಲಿಲ್ಲ. ಯಾರಿಂದಲೂ

ಅದರ ಬೆಲೆ ಕಟ್ಟಲು ಸಾಧ್ಯವಾಗಲಿಲ್ಲ. ಅಂತಹ ನಾಜೂಕಾದ ವಸ್ತ್ರವದು. ಶಿವಶರಣನು ನೇಯ್ದ ವಸ್ತ್ರ ಪವಿತ್ರವಾದುದೆಂದು ಭಾವಿಸಿ ಯಾರೂ ಕೊಳ್ಳಲು ಧೈರ್ಯಮಾಡಲಿಲ್ಲ. ಮಾರುವ ವಿಚಾರ ಬಿಟ್ಟುಕೊಟ್ಟು ಮುದನೂರಿಗೆ ಮರಳಿದನು.

ಧೀರ ಶಿವಶರಣ ದೇವರದಾಸಿಮಯ್ಯನ ಮಹಿಮೆಯನ್ನು ಪ್ರಪಂಚಕ್ಕೆಲ್ಲ ಅರುಹಬೇಕೆಂದು ಶಿವನು ವೃದ್ಧ ಜಂಗಮ ವೇಷ ಧರಿಸಿದನು. ದೇವರದಾಸಿಮಯ್ಯನು ತನ್ನೂರಿಗೆ ಮರಳುವ ದಾರಿಯಲ್ಲಿ ಚಳಿಯಲ್ಲಿ ನಡುಗುತ್ತ ನಿಂತನು. ದೇವರದಾಸಿಮಯ್ಯನ ಬಳಿಯಿರುವ ವಸ್ತ್ರಕ್ಕೆ ಆಶೆಪಟ್ಟನು. ಏನೂ ವಿಚಾರಿಸದೆ ಆ ಅಮೂಲ್ಯ ವಸ್ತ್ರವನ್ನು ದೇವರದಾಸಿಮಯ್ಯನು ಮುದುಕ ಜಂಗಮನಿಗೆ ಕೊಟ್ಟುಬಿಟ್ಟನು. ವೃದ್ಧ ಜಂಗಮನು ಆ ಬೆಲೆಯುಳ್ಳ ವಸ್ತ್ರವನ್ನು ಅವನೆದುರಿಗೆ ನಾಲ್ಕು ತುಂಡಾಗುವಂತೆ ಹರಿದನು. ಒಂದು ತುಂಡನ್ನು ತನ್ನ ಶಿರಕ್ಕೆ ಸುತ್ತಿದನು, ಇನ್ನೊಂದು ತುಂಡನ್ನು ಹೊದ್ದುಕೊಂಡನು. ಮಗುದೊಂದನ್ನು ತನ್ನ ಹಸ್ತಪಾವುಡ ಮಾಡಿಕೊಂಡನು. ಉಳಿದ ತುಂಡನ್ನು ಕೋಲಿಗೆ ಸುತ್ತಿದನು. ಅದಕ್ಕೆ ದೇವರದಾಸಿಮಯ್ಯನು ಎಳ್ಳಷ್ಟೂ ಕೋಪಿಸಿಕೊಳ್ಳಲಿಲ್ಲ. ಬದಲಾಗಿ "ನಿಮ್ಮ ವಸ್ತು ನಿಮ್ಮ ಇಚ್ಛೆಗೆ ಬಂದಂತೆ ಮಾಡಬಹುದೆಂದು" ಹೇಳಿದನು. ಅವನನ್ನು ತನ್ನ ಮನೆಗೆ ಕರೆದೊಯ್ದು ಉಪಚರಿಸಿದನು. ದುಗ್ಗಳೆಯೂ ಅವನಿಗೆ ಸಕಲ ಪದಾರ್ಥಗಳನ್ನಿತ್ತು ಸಂತೋಷಪಡಿಸಿದಳು. ಸತಿ-ಪತಿಗಳ ಒಂದಾದ ಭಕ್ತಿ ವೇಷದ ಜಂಗಮನಿಗೆ ಹಿತವಾಗಿ ಕಂಡಿತು.

ಸಂಪ್ರೀತನಾದ ಜಂಗಮವೇಷಿ ಶಿವನು ಅವರಿಗಿರುವ ಬಡತನಕ್ಕೆ ನೊಂದುಕೊಂಡನು. "ಇಂತಹವರಿಗೆ ಬಡತನವೆಂಬುದಿರುವುದು ವಿಹಿತವಲ್ಲ"ವೆಂದು ದುಗ್ಗಳಾದೇವಿಯನ್ನು ಕರೆದು "ಸಾಧ್ವಿಶಿರೋಮಣಿಯೇ, ನಾನು ಕೊಡುವ ಹಿಡಿ ಧಾನ್ಯವನ್ನು ಮನೆಯೊಳಗಿನ ಧಾನ್ಯಸಂಗ್ರಹದಲ್ಲಿ ಶಿವಮಂತ್ರ ಉಚ್ಚರಿಸುತ್ತ ಕೂಡಿಸಿಬಿಡು, ನಿಮ್ಮ ಧಾನ್ಯ ಅಕ್ಷಯವಾಗುವುದು." "ನಾನು ಕೊಟ್ಟುದು '**ತವನಿಧಿ**'" ಎಂದು ಹೇಳಿದನು.

"ನಿನ್ನಂತೆ ಯಾರು ಕಾಯಕನಿರತರಾಗಿ, ಅಷ್ಟಾವರಣಗಳಲ್ಲಿ ಶ್ರದ್ಧೆಯಿಟ್ಟು ನಡೆಯುವರೋ, ಸರ್ವ ಪ್ರಾಣಿಗಳಲ್ಲಿ ದಯಾಮಯರಾಗುವರೋ, ಲಿಂಗಾಸಕ್ತರಾಗುವರೋ, ಶಿವನಾಮ ಸ್ಮರಣೆಯನ್ನು ಸಂತತ ಮಾಡುವರೋ ಅಂತಹರಲ್ಲಿ 'ತವನಿಧಿಯು' ಸಂತತವಾಗಿ ಉಳಿಯುವುದು. ಅಹಂಕಾರಿಗಳಲ್ಲಿ ಇದು ತಕ್ಷಣ ಇಲ್ಲದಾಗುವುದು, ಅವರಿಗೆ ಧಾನ್ಯದ ಕೊರತೆಯುಂಟಾಗಿ ಕಷ್ಟಕ್ಕೀಡಾಗುವರು" ಎಂದು ಅಪ್ಪಣೆ ಕೊಡಿಸುವನು ಶಿವನು. ಈ ಪವಾಡವು ಶಿವಶರಣರ ಚರಿತ್ರೆಗಳಲ್ಲಿ ಪ್ರಸಿದ್ಧವಾಗಿದೆ. ಶಿವನ ಅನುಗ್ರಹಕ್ಕೆ ಪಾತ್ರನಾಗಿ ತವನಿಧಿಯನ್ನು ಪಡೆದ ಬಳಿಕ ಇಮ್ಮಡಿ ಉತ್ಸಾಹದಿಂದ ದೇವರ ದಾಸಿಮಯ್ಯನು ದಾಸೋಹ ಕಾರ್ಯವನ್ನು ನಡೆಸುವನು. ಶಿವಾನುಭವ ತತ್ತ್ವಗೋಷ್ಠಿಯಲ್ಲಿ ಭಾಗಿಗಳಾಗಲು ಜನರು ಹಾತೊರೆಯತೊಡಗಿದರು. ಶಿಷ್ಯರ ಸಂಖ್ಯೆ ಅಧಿಕವಾಯಿತು. ಇದರಿಂದ ಧರ್ಮಪ್ರಸಾರದಂತಹ ಪವಿತ್ರ ಕಾರ್ಯಕ್ಕೆ ಸಹಾಯ

ವಾಯಿತು. ಅಂದಿನಿಂದ ದಾಸಿಮಯ್ಯನು ತಪಸಿದ್ಧಿ ಪಡೆದ ದೇವರದಾಸಿಮಯ್ಯನೆಂದು ಸುಪ್ರಸಿದ್ಧನಾದನು.

ನೇಯ್ಗೆ ಕಾಯಕದಲ್ಲಿ ಮಗ್ನನಾಗಿ ರಾಮನಾಥನ ಭಕ್ತಿಯಲ್ಲಿ ಸಂತೋಷದಿಂದಿದ್ದನು. ಹೀಗೆ ದಿನಗಳೆಷ್ಟೋ ಸಂದುವು. ಪರಮಾತ್ಮನಲ್ಲಿ ಬೆರೆಯುವ ಬಯಕೆ ಹಿರಿದಾಯಿತು. ರಾಮನಾಥ ದೇವಾಲಯಕ್ಕೆ ಎಂದಿನಂತೆ ಬಂದನು. "ನಿನ್ನ ಅನುಗ್ರಹದಿಂದ ಸಮಾಜಸೇವೆಯಲ್ಲಿ ತೊಡಗಿ ಧರ್ಮಪ್ರಚಾರದ ಕಾರ್ಯ ನಿರ್ವಹಿಸಿದೆನು. ಇನ್ನು ನಿನ್ನಲ್ಲಿರಿಸಿಕೊ" ಎಂದು ಪರಿಪರಿಯಿಂದ ಪ್ರಾರ್ಥಿಸಿದನು. ಭಕ್ತನ ಮನದಾಸೆಯನ್ನು ಈಡೇರಿಸಲು ಪರಮಾತ್ಮನು ಪ್ರತ್ಯಕ್ಷನಾದನು. ಶಿವಶರಣೆ ದುಗ್ಗಳೆಯೂ "ಪತಿಯ ನಡೆಯೇ ನನ್ನ ನಡೆ, ಅವರಂತೆ ನನ್ನನ್ನೂ ನಿಮ್ಮಲ್ಲಿ ಇಂಬುಗೊಟ್ಟು ಇಟ್ಟುಕೊಳ್ಳಿ"ಂದು ಕೋರಿದಳು. ಪರಮಾತ್ಮಧ್ಯಾನದಲ್ಲಿ ನಿರತರಾದ ಅವರು ರಾಮನಾಥನಲ್ಲಿ ಬಯಲಾದರು.

ದೇವರದಾಸಿಮಯ್ಯನು ಕಾಲ್ಪನಿಕ ವ್ಯಕ್ತಿಯಲ್ಲ. ಅವನೊಬ್ಬ ಐತಿಹಾಸಿಕ ವ್ಯಕ್ತಿ, ಮಹಾಪುರುಷ. ಅವನ ಬಗೆಗೆ ಹಿರಿಯೂರು, ಗೊಬ್ಬೂರುಗಳ ಶಾಸನಗಳಲ್ಲಿ ಉಲ್ಲೇಖವಿದೆ. ದೇವರದಾಸಿಮಯ್ಯನನ್ನು ಕುರಿತು ಕವಿಗಳು ಪುರಾಣಗಳನ್ನು ರಚಿಸಿದ್ದಾರೆ. ಅವನನ್ನು ಕುರಿತು ಬರೆದ ಸಾಹಿತ್ಯ ವಿಪುಲವಾಗಿದೆ. ಇಲ್ಲಿ ಆ ಧೀರ ಶರಣನ ಪ್ರಸಿದ್ಧಿಯನ್ನು ಸಾರುತ್ತವೆ. ಹಿರಿಯೂರು ಶಾಸನದ ಕಾಲ ಕ್ರಿ. ಶ. ೧೦೬೫-೬೬.

ಹಾಸನ ಜಿಲ್ಲೆಯ ಅರಸಿಕೆರೆ ತಾಲೂಕಿನ ಚಿಕ್ಕ ಗ್ರಾಮ ಹಿರಿಯೂರು.

"ಸಲೆ ಚೋಳನುಬ್ಭಟನಸತರ್ಕ್ಯಂ ಸಿಂದಬಲ್ಲಾಳ ಸೀ |
ಧರೆ ಕೊಂಡಾಡುವ ದಾಸಿಮಯ್ಯನೆಸೆದಿರ್ದೀ ಭಕ್ತ
ಸಂದೋಹ | "

ಎಂಬ ಶಾಸನದ ಭಾಗ ದೇವರದಾಸಿಮಯ್ಯನ ಮಹತಿ ಹಾಗೂ ಪ್ರಸಿದ್ಧಿಯನ್ನು ಸಾರುತ್ತದೆ.

ಚಾಲುಕ್ಯರಾಜ ಜಯಸಿಂಹನು ಕ್ರಿ. ಶ. ೧೦೦೮ ರಿಂದ ೧೦೪೦ರ ವರೆಗೆ ರಾಜ್ಯಭಾರ ಮಾಡಿದಂತೆ ಡಾ|| ಫ್ಲೀಟ ಸಾಹೇಬರು ಒಪ್ಪಿದ್ದಾರೆ. ಆಗ ಪೊಟಲಕೆರೆ ಅವನ ರಾಜಧಾನಿಯಾಗಿತ್ತು. ಸುಗ್ಗಳೆಯು ರಾಜನ ಧರ್ಮಪತ್ನಿ. ದಾಸಿಮಯ್ಯನ ಶಿಷ್ಯಳಾಗಿದ್ದಳೆಂಬುದನ್ನು ಬಹಳ ಜನ ಲೇಖಕರೂ, ಕವಿಗಳೂ ಹೇಳಿದ್ದಾರೆ; ಅದನ್ನು ಒಪ್ಪಿಕೊಂಡಿದ್ದಾರೆ. ಇದರಿಂದ ದೇವರದಾಸಿಮಯ್ಯನೂ ಕ್ರಿ. ಶ. ೧೦೦೮ರಿಂದ ೧೦೪೦ರಲ್ಲಿರಬೇಕೆಂಬುದನ್ನು ಒಪ್ಪಿದಂತೆಯೇ. ಕರ್ಣಾಟಕ ಹಿರಿಯ ಲೇಖಕರು ಇದನ್ನೊಪ್ಪಿದ್ದಾರೆ. ಸುಮಾರು ಕ್ರಿ. ಶ. ೧೧೫೫ ರಲ್ಲಿದ್ದ ಜೈನ ಕವಿ ಬ್ರಹ್ಮಶಿವನು ಸಮಯ ಪರೀಕ್ಷೆಯಲ್ಲಿ ದೇವರದಾಸಿಮಯ್ಯನ ಹೆಸರನ್ನು ಹೇಳಿದ್ದಾನೆ. ಆದ್ದರಿಂದ ಇದಕ್ಕೂ ಪೂರ್ವದಲ್ಲಿ ದೇವರದಾಸಿಮಯ್ಯನು ಇದ್ದಂತಾಯಿತು.

"....ಜಗವೆಲ್ಲ ಅರಿಯಲು ತೊರೆಯೊಳಗೆ ಬಿದ್ದ ಲಿಂಗ
ಕರೆದರೆ ಬಂದುದು ಕರಸ್ಥಳಕ್ಕೆ |
ನಂಬದೆ ಕರೆದವರ ಹಂಬಲನೊಲ್ಲ ನಮ್ಮ ರಾಮನಾಥ"

ಎಂಬ ದೇವರದಾಸಿಮಯ್ಯನ ವಚನದಿಂದ ಅವನು ಅನೇಕ ವರ್ಷ ಬದುಕಿರಬೇಕೆಂಬುದು ವಿದಿತವಾಗುವುದು. ೧೧ನೆಯ ಶತಮಾನದ ಕೊನೆಯಲ್ಲಿ ಬಾಳಿದ ಕೊಂಡುಕುಳಿ ಕೇಶಿರಾಜನ ಮಹಿಮೆಯು ಈ ವಚನದಲ್ಲಿ ವರ್ಣಿತವಾಗಿದೆ. ಇದನ್ನು ಕೇಳಿದ ದೇವರದಾಸಿಮಯ್ಯನು ತನ್ನ ಮಗನ ಶಿಷ್ಯನಾದ ಕೇಶಿರಾಜನ ಪವಾಡವನ್ನು ಇಲ್ಲಿ ಉಲ್ಲೇಖಿಸಿದ್ದಾನೆ. ಇದರಿಂದ ದೇವರದಾಸಿಮಯ್ಯನು ಅನೇಕ ವರ್ಷ ಬಾಳಿರಬೇಕೆಂಬುದು ತಿಳಿದುಬರುತ್ತದೆ.

"ಗೊಬ್ಬೂರಲ್ಲಿಯ ಶಾಸನದ ಕಾಲ ಅದರಲ್ಲಿ ಹೇಳಿದಂತೆ ಕ್ರಿ.ಶ. ೧೧೪೮. ಆಗ ಬಸವಣ್ಣನವರ ವಯಸ್ಸು ೧೬ ಇತ್ತೆಂದು ತಿಳಿಯುವುದು. ದೇವರದಾಸಿಮಯ್ಯನು ಈ ಕಾಲದಲ್ಲಿ ಇಷ್ಟು ಪ್ರಸಿದ್ಧಿಗೆ ಬರಬೇಕಾದರೆ ಇದಕ್ಕೂ ಮುಂಚೆಯೇ ಬಹಳ ಕಾಲ ಆತನು ಜೀವಿಸಿರಬೇಕು". ಜಯಸಿಂಹನ ಕಾಲಕ್ಕೆ ೧೧ನೆಯ ಶತಮಾನದ ಮಧ್ಯಭಾಗದಲ್ಲಿದ್ದಿರಬಹುದೆಂಬ ಊಹೆಗೆ ಬಲ ಬರುತ್ತದೆ. ಕಾವ್ಯ, ಶಾಸನ, ಹಿರಿಯರ ಲೇಖನ, ಶರಣರ ವಚನಗಳು— ಮೊದಲಾದವುಗಳಿಂದ ದೇವರದಾಸಿಮಯ್ಯನು ಕ್ರಿ. ಶ. ೧೦೦೮ರಿಂದ ೧೦೫೦ರ ವರೆಗಿನ ಅವಧಿಯಲ್ಲಿರಬೇಕೆಂಬುದನ್ನು ಒಪ್ಪಬಹುದು.

ಈ ವರೆಗಿನ ಚರಿತ್ರೆಯಿಂದ ದೇವರ ದಾಸಿಮಯ್ಯನು ವೀರ-ಶೈವಧರ್ಮಪ್ರಸಾರ ಮಾಡುವಲ್ಲಿ ಬಹುಶ್ರಮ ವಹಿಸಿದನೆಂಬುದು ಗೋಚರವಾಗುವದು. ಅವನು ಮೇಲ್ತರಗತಿಯ ಬೋಧಕನಾಗಿದ್ದನು. ಅವನ ವ್ಯಕ್ತಿತ್ವ ವಿಶಿಷ್ಟವಾದುದು,

ಪ್ರಭಾವಿತವಾದುದು. ಶ್ರೇಷ್ಠ ಧರ್ಮಪ್ರಚಾರಕನೂ ಹೌದು, ಅವನು ಅನುಭವಿ, ಜ್ಞಾನಿ, ನಿಷ್ಕಾಮಪರನೆಂಬುದು ಸ್ಪಷ್ಟವಾಗಿ ವ್ಯಕ್ತವಾಗುವುದು. ದೇವರದಾಸಿಮಯ್ಯನ ಧರ್ಮಪ್ರಚಾರ ಕಾರ್ಯದಲ್ಲಿ ವೀರಶೈವಧರ್ಮ ಪರಾಯಣೆಯಾದ ಸುಗ್ಗಲೆಯ ಸಹಾಯ ವಿಶೇಷವಾಗಿತ್ತೆಂದು ತಿಳಿಯುವುದು. ವೀರಶೈವ ಗ್ರಂಥಗಳಲ್ಲಿ ಸುಗ್ಗಲೆಯ ಉಲ್ಲೇಖವು ಮೇಲಿಂದಮೇಲೆ ಬರುತ್ತದೆ. ಹಳೇಬೀಡಿನ ಶಾಸನದಲ್ಲಿ ಅವಳ ಹೆಸರು ದೊರೆಯುವದರಿಂದ ಐತಿಹಾಸಿಕ ವ್ಯಕ್ತಿಯಾಗಿದ್ದಳೆಂಬುದು ಸ್ಪಷ್ಟ. ಗೊಬ್ಬೂರು, ಹಿರಿಯೂರು ಶಾಸನಗಳಲ್ಲಿ ಉಲ್ಲೇಖಿತನಾದ ದೇವರದಾಸಿಮಯ್ಯನು ಕಾಲ್ಪನಿಕ ಪುರುಷನಾಗಿರಲಿಕ್ಕಿಲ್ಲವೆಂಬುದು ಸುಸ್ಪಷ್ಟ.

ದೇವರದಾಸಿಮಯ್ಯ ಮತ್ತು ಜೇಡರದಾಸಿಮಯ್ಯ ಬೇರೆ ಬೇರೆಯೆಂಬ ವಿಚಾರವೊಂದಿದೆ. ಇವರು ಬೇರೆ ಬೇರೆಯಲ್ಲ, ಇಬ್ಬರೂ ಒಂದೇ ಇರಬೇಕೆಂಬ ಬಗ್ಗೆ ಅಥವಾ ಜೇಡರದಾಸಿ-ಮಯ್ಯನೇ ವಚನಕಾರ ದೇವರದಾಸಿಮಯ್ಯನೆಂಬುದಕ್ಕೆ

"ಉಂಕಿಯ ನಿಗುಚಿ, ಸರಿಗೆಯ ಸಮಗೊಳಿಸಿ,
ಸಮಗಾಲನಿಕ್ಕಿ, ಅಣೆಯೊಳು ಏಳವೆಟ್ಟದೆ
ಹಿಡಿದ ಲಾಳಿಯಮುಳ್ಳು ಕಂಡಿಕೆಯ ನುಂಗಿತ್ತು
ಈ ಸೀರೆಯ ನೇಯ್ದವ ನಾನೋ, ನೀನೋ ರಾಮನಾಥ?"

ಎಂಬ ವಚನ ಸಾಕ್ಷಿಯಾಗಿದೆ. "ಬಸವೇಶ್ವರನಿಗಿಂತ ನೂರಾರು ವರ್ಷ ಮುಂಚಿನಿಂದ ಜೇಡರದಾಸಿಮಯ್ಯ, ಶಂಕರದಾಸಿಮಯ್ಯ

ನಂತಹ ಶಿವಶರಣರು ಹುಟ್ಟಿ ಚಾರಿತ್ರ್ಯದಿಂದಲೂ ವಾದ
ವಿಜಯಗಳಿಂದಲೂ ವೀರಶೈವಧರ್ಮವನ್ನು ಬೆಳೆಸುತ್ತಿದ
ರೆನ್ನಲು ಅಡ್ಡಿಯಿಲ್ಲ." ಅವರಿಂದ ವಚನ ರಚನೆಯೂ ನಡೆಯಿತು
ವಚನ ವಾಙ್ಮಯಕ್ಕೆ ಒಂದು ತಳಹದಿ, ಒಂದು ಪರಂಪ
ದೊರೆಯಿತು. ದೇವರ ದಾಸಿಮಯ್ಯನ ೧೫೦ ವಚನಗಳ
ಇಂದು ಉಪಲಬ್ಧವಾಗಿವೆ, ಪ್ರಸಿದ್ಧವಾಗಿವೆ.

## ದೇವರದಾಸಿಮಯ್ಯನ ವಚನಗಳು

ವಚನಗಳು ಕನ್ನಡ ಸಾಹಿತ್ಯದ ತವನಿಧಿ. ಚಿತ್ತದ ಎತ್ತ
ದಿಂದ ಮೂಡಿಬಂದುವು. ವಿಶ್ವಸಾಹಿತ್ಯದಲ್ಲಿ ಇವಕ್ಕೆ ವಿಶಿಷ್ಟ
ಸ್ಥಾನವಿದೆ. ಇವುಗಳನ್ನು ಹೋಲುವ ಸಾಹಿತ್ಯ ವಿಶ್ವಸಾಹಿತ
ದಲ್ಲಿ ಕಡಮೆ. ಈ ವಚನಗಳು ಕನ್ನಡದ ಉಪನಿಷತ್ತುಗಳಾ
ಗಿವೆ. ಇವನ್ನು ರಚಿಸಿದವರು 'ಕನ್ನಡದ ರಸ ಋಷಿಗಳು.
ಇವು 'ಕನ್ನಡ ಸಾಹಿತ್ಯದ ಸ್ವಾರ್ಜಿತ ಸಂಪತ್ತು; ಎರವಲು ತಂದ
ಸಂಪತ್ತಲ್ಲ, 'ವಚನಕಾರರು ಕನ್ನಡದ ಬೇಸಾಯಗಾರರು
ಶರಣರು ಕನ್ನಡಕ್ಕೆ ಕೊಟ್ಟ ಕಾಣಿಕೆ ವಚನ. ಕನ್ನಡ ಸಾಹಿತ್ಯ
ಭಂಡಾರದ ಅಮೂಲ್ಯ ರತ್ನಗಳು ಈ ವಚನಗಳು. ವಚನಕಾರರ
ಅನುಭಾವಿಗಳ ಅಂತರಾಕಾಶದಲ್ಲಿ ಉದಯಿಸಿದ ವಿಚಾರ
ವೈಭವವೆ ವಚನಗಳಾಗಿವೆ. ಆಧ್ಯಾತ್ಮಿಕ ಭಾವಗೀತೆಗಳಾಗಿವೆ
ವಚನಗಳು. ವಚನಗಳ ಅನುಭಾವಗದ್ಯ ಅಪರೂಪವಾಗಿದೆ.
ಇಂತಹ ಅಪೂರ್ವ ಸಾಹಿತ್ಯವನ್ನು ರಚಿಸಿದ ಶ್ರೇಯಸ್ಸು ದೇವರ
ದಾಸಿಮಯ್ಯನಿಗೂ ಸಲ್ಲುವುದು. ಈಗ ದೊರೆತಿರುವ ಸಾಮಗ್ರಿ

ಯಿಂದ ದೇವರದಾಸಿಮಯ್ಯನೇ ಮೊದಲಿನ ವಚನಕಾರ ನೆಂದು ಹೇಳಬಹುದು. ಇವನಿಗಿಂತ ಪೂರ್ವದಲ್ಲಿ ಈ ವಚನ ಗಳು ಇದ್ದುವೆಂದು ದೇವರದಾಸಿಮಯ್ಯನು ಹೇಳಿದ್ದಾನೆ. ಆದರೆ ಕನ್ನಡಿಗರ ದುರ್ದೈವ. ಅವು ಯಾವವೂ ಈ ವರೆಗೂ ದೊರೆತಿಲ್ಲ. ಇವರ ಸೂಳ್ನುಡಿಗಳು ನಮ್ಮ ಸಂಸ್ಕೃತಿಗೆ ಹಿಡಿದ ಸೊಡರಿ ನಂತಿವೆ. ಈ ವಚನಗಳು ಸೂತ್ರಪ್ರಾಯವಾಗಿದ್ದು ಅರ್ಥ ಗರ್ಭಿತವಾಗಿವೆ.

## ವಚನಗಳ ಮಹತ್ವ

ಶರಣರು ವಚನಸಾಹಿತ್ಯದ ಮೇಲ್ಮೆಯನ್ನು ವಚನಗಳ ಮುಖಾಂತರ ತಿಳಿಸಿದ್ದಾರೆ. ಅದ್ವಿತೀಯ ವಚನಕಾರರಾದ ಭಕ್ತಿಭಂಡಾರಿ ಬಸವಣ್ಣನವರು "ಆದ್ಯರ ವಚನ ಪರುಷ ಕಂಡಯ್ಯ! ಸದಾಶಿವನೆಂಬ ಲಿಂಗವ ನಂಬುವುದು, ನಂಬಲೊಡನೆ ನೀ ವಿಜಯ ಕಂಡಯ್ಯ! ಅಧರಕ್ಕೆ ಕಹಿ, ಉದರಕ್ಕೆ ಸಿಹಿ. ಕೂಡಲಸಂಗನ ಶರಣರ ವಚನ ಬೇವಸವಿದಂತೆ!" ಕಬ್ಬಿಣವನ್ನು ಬಂಗಾರವನ್ನಾಗಿ ಮಾಡಬಲ್ಲ ಪರುಷದಂತೆ, ಅಂಗವನ್ನು ಲಿಂಗ ವನ್ನಾಗಿ ಮಾಡಬಲ್ಲ ಶರಣರ ವಚನಗಳನ್ನು ನಂಬಬೇಕು, ಸೇವಿಸಬೇಕು. ಭವರೋಗದಿಂದ ಪೀಡಿತರಾದ ಮಾನವರ ಅಧರಕ್ಕೆ ಕಹಿಯಾದರೂ ಉದರಕ್ಕೆ ಸಿಹಿಯಾಗುತ್ತವೆ. ಬೇವು ರೋಗಿಗಳನ್ನು ನಿರೋಗಿಯನ್ನಾಗಿ ಮಾಡುವುದು, ವಜ್ರಕಾಯ ವಾಗುವಂತೆ ಪರಿವರ್ತಿಸುವುದು. ಅಂತೆಯೇ ಶರಣರ ಸೂಳ್ನುಡಿ

ಗಳನ್ನು ಸವಿದವರು ನಿತ್ಯರಾಗಿ, ಮುಕ್ತರಾಗಿ ಎಂದೆಂದಿಗೂ ಭವಕ್ಕೆ ಬಾರದವರಾಗುವರು.

"ಹಾಲತೊರೆಗೆ ಬೆಲ್ಲದಂತಹ ಕೆಸರು;
ಸಕ್ಕರೆಯಂತಹ ಮಳಲು, ತವರಾಜದಂತಹ
ನೊರೆತೆರೆಗಳು.
ಇಂತಪ್ಪ ಆದ್ಯರ ವಚನವಿರಲು ಬೇರೆ ಬಾವಿಯ ತೋಡಿ
ಉಪ್ಪುನೀರ
ಸವಿದಂತಾಯಿತ್ತಯ್ಯ ಎನ್ನಯುಕ್ತಿ ನಿಮ್ಮ ವಚನಂಗಳ
ಕೇಳದೆ,
ಅನ್ಯ ಪುರಾಣಗಳ ಕೇಳಿ ಕೆಟ್ಟೆನಯ್ಯ ಕೂಡಲ
ಸಂಗಮದೇವ."

ಇಂತಹ ಗುಣಗಳಿಂದ ಕೂಡಿದುವು ವಚನಗಳು. ಅವುಗಳ ಸ್ವಾದಿಷ್ಟವನ್ನು ಸವಿಯುವುದು ನಮ್ಮ ಕರ್ತವ್ಯ. ಬಸವಣ್ಣನವರ ಈ ವಚನ ಅವುಗಳ ಮಹತ್ವವನ್ನು ಸಾರಿಹೇಳುತ್ತಿದೆ.

ದೇವರದಾಸಿಮಯ್ಯ ಎರಡು ವಚನಗಳಲ್ಲಿ ಇವುಗಳ ಮಹಿಮೆಯನ್ನು ಸಾರಿದ್ದಾನೆ.

"ಕರಿಯನಿತ್ತಡೆ ಒಲ್ಲೆ. ಸಿರಿಯನಿತ್ತಡೆ ಒಲ್ಲೆ.
ಹಿರಿದಪ್ಪರಾಜ್ಯವನಿತ್ತಡೆ ಒಲ್ಲೆ.
ನಿಮ್ಮ ಶರಣರ ಸೂಳ್ನುಡಿಯು ಒಂದರಗಳಿಗೆ
ಇತ್ತಡೆ ನಿಮ್ಮನಿತ್ತೆ ಕಾಣಾ ರಾಮನಾಥಾ."

ಈ ವಚನದಲ್ಲಿ ದೇವರದಾಸಿಮಯ್ಯನು ಶರಣರ ಸೊಳ್ನುಡಿಗಳಲ್ಲಿ ( ತಾತ್ವಿಕ ಮಾತುಗಳಲ್ಲಿ ) ಎಂತಹ ಗೌರವವಿರಿಸಿದ್ದ-ನೆಂಬುದು ಗೋಚರವಾಗುವುದು. ಅವಕ್ಕಾಗಿ ಅವನಿಗೆ ಕರಿ, ಸಿರಿ, ಹಿರಿದಾದರಾಜ್ಯ ಕೊಟ್ಟರೂ ತ್ಯಜಿಸುವ ಉತ್ಕಟೇಚ್ಛೆಯಿದೆ. ಶರಣರ ನುಡಿಗಳನ್ನು ಒಂದರಗಳಿಗೆ ಕೊಟ್ಟರೆ ಪ್ರತಿಯಾಗಿ ಪರಮಾತ್ಮನನ್ನು ಕೊಡಲು ಸಿದ್ಧನು. ಈ ವಚನದಿಂದ ದೇವರ ದಾಸಿಮಯ್ಯನ ಪೂರ್ವದಲ್ಲಿಯೂ ವಚನ ಸಾಹಿತ್ಯ ಇತ್ತೆಂಬುದು ತಿಳಿಯುವುದು. ದೇವರದಾಸಿಮಯ್ಯನು ಅದನ್ನು ಸವಿದುದ ರಿಂದಲೇ ಹೀಗೆ ಹೇಳಿರಬೇಕು. ಅವು ಯಾವವೂ ದೊರೆಯ-ದಿದ್ದುದು ಕನ್ನಡ ಸಾಹಿತ್ಯಕ್ಕೆ ಅಪಾರ ಹಾನಿಗೆ ಕಾರಣವಾಗಿದೆ.

> "ಕಡೆಗೀಲಿಲ್ಲದ ಬಂಡಿ ಹೊಡೆಗೆಡುವುದು ಮಾಬುದೆ ?
> ಕಡೆಗೀಲು ಬಂಡಿಗಾಧಾರ.
> ಕಡು ದರ್ಪವೇರಿದ ಒಡಲೆಂಬ ಬಂಡಿಗೆ
> ಮೃಡ ಶರಣರ ನುಡಿಗಡಣವೆ ಕಡೆಗೀಲು ಕಾಣಾ
> ರಾಮನಾಥ "

ಮೃಡಶರಣರ ( ಶಿವಶರಣರ ) ನುಡಿಸಮೂಹ ಇಹಪರಗಳೆ ರಡಕ್ಕೂ ಆವಶ್ಯಕ. ನಮ್ಮ ದೇಹರಥವನ್ನು ರಕ್ಷಿಸುವ, ಆತ್ಮ ರಥಿಯನ್ನು ಸುಖದಲ್ಲಿರಿಸುವ ಸಾಧನಗಳಾಗಿವೆ ವಚನಗಳು. ಕೀಲುಯಿಲ್ಲದ ಬಂಡಿ ಎಲ್ಲಿಯಾದರೂ ಬಿದ್ದು ಅಪಾಯಕ್ಕೆ ಈಡು ಮಾಡುತ್ತದೆ. ಬಂಡಿ ಸರಿಯಾಗಿ ಸಾಗಲು ಕೀಲದ ಅಗತ್ಯ ವಿದೆ, ಕೀಲವು ಆಧಾರವಾಗಿದೆ. ಸೊಕ್ಕಿನಿಂದ ಮೆರೆಯುವ ಮಾನ

ವನಿಗೆ ಯೋಗ್ಯಾಯೋಗ್ಯ ವಿಚಾರಗಳ ಗೊಡವೆಯಿರುವದಿಲ್ಲ. ಹುಚ್ಚು ಹುಚ್ಚಾಗಿ ವರ್ತಿಸತೊಡಗುತ್ತಾನೆ ಹಣವುದದಿಂದ ಮಾನವ. ಇಂತು ದರ್ಪದಿಂದ ಕೂಡಿದ ಒಡಲೆಂಬ ಬಂಡಿಗೆ ಶಿವಶರಣರ ನುಡಿಗಡಣವೇ ಕಡೆಗೀಲು. ಇಂತಹ ಸಮರ್ಥಕೀಲು ಪಡೆದರೆ ಮಾತ್ರ ಒಡಲ ಬಂಡಿ ದಡ ಹೊಂದಲು ಸಾಧ್ಯವಾಗುವುದು. ಇಲ್ಲವಾದಲ್ಲಿ ನರಕಕ್ಕೆ ಉರುಳಿ ಹೋಗುತ್ತದೆ. ಮತ್ತೆ ಎತ್ತಿ ನಿಲ್ಲಿಸಿದರೂ ಸ್ವಲ್ಪ ಮಾರ್ಗ ಕ್ರಮಿಸಿ ಪುನಃ ಉರುಳುತ್ತದೆ. ಹೀಗೆ ಭವ ಭವದಲ್ಲಿ ಬಂದು ಏನೇನೋ ಆಗಿ ಜೀವಾತ್ಮನು ಕಷ್ಟಪಡಬೇಕಾಗುತ್ತದೆ. ಈ ಕಷ್ಟಪರಂಪರೆಯಿಂದ ಮುಕ್ತರಾಗಲು ಸುಲಭಮಾರ್ಗವೆಂದರೆ ಪೂರ್ವಶರಣರ ನುಡಿಗಡಣವನ್ನು ಹೊಂದುವುದು. ಹುಟ್ಟುಸಾವುಗಳನ್ನು ತಪ್ಪಿಸುತ್ತವೆ ಈ ನುಡಿಗಳು. ಆತ್ಮೋದ್ಧಾರ ಹೊಂದಬಯಸುವವರೆಲ್ಲ ಶರಣರ ನುಡಿಗಳನ್ನು ಬಯಸಿ ನಡೆಯಬೇಕು.

ಇಲ್ಲಿ ಸರಳ ದೃಷ್ಟಾಂತದಿಂದ, ಉಪಮಾನದಿಂದ ವಚನಗಳ ಮಹತ್ವವನ್ನು ದೇವರದಾಸಿಮಯ್ಯನು ತಿಳಿಸಿದ್ದಾನೆ. ನಿತ್ಯ ಒಂದರಗಳಿಗೆಯಾದರೂ 'ವಚನಗಳನ್ನು' ಅಭ್ಯಾಸಮಾಡುವ ಚಟ ಬೆಳೆಸಿಕೊಳ್ಳುವುದು ವಿಹಿತ.

## ಪ್ರಾರ್ಥನಾಪರವಾದ ವಚನಗಳು

ಪ್ರಾರ್ಥನೆ ಆತ್ಮದ ಆಹಾರ. ಪರಮಾತ್ಮನ ಅಪಾರ ಕರುಣೆಯನ್ನು ಕೃತಜ್ಞತಾಭಾವದಿಂದ ಸ್ಮರಿಸಬೇಕು. ನೈತಿಕಬಲವನ್ನೂ ಸಾಮರ್ಥ್ಯವನ್ನೂ ಕೊಡುತ್ತದೆ–ಪ್ರಾರ್ಥನೆ. ಇಂತಹ ಪ್ರಾರ್ಥ

ನೆಯ ಮಹಿಮೆ ಸಣ್ಣದಲ್ಲ. ದೇವರದಾಸಿಮಯ್ಯನ ಸ್ತೋತ್ರರೂಪವಾದ ವಚನಗಳು ಮನುಷ್ಯನಲ್ಲಿ ಜಾಗೃತಿಯನ್ನು ಹುಟ್ಟಿಸುತ್ತವೆ. ಈ ಭೂಮಿ ಪುಣ್ಯಮಯವಾದುದು. ಇಲ್ಲಿ ಜನಿಸಿ ಪರಮಾತ್ಮನನ್ನು ಕುರಿತು ಪ್ರಾರ್ಥಿಸದಿದ್ದರೆ, ಕೆಚ್ಚಲದಲ್ಲಿದ್ದು ಹಾಲನ್ನು ಉಣ್ಣದ ಉಣ್ಣೆಯಂತೆ ಆಗುತ್ತದೆ. ಅಂಥ ಜೀವನ ಉಣ್ಣೆಯ ಜೀವನಕ್ಕಿಂತ ಕಷ್ಟಕರವಾಗುತ್ತದೆ.

"ಇಳೆ ನಿಮ್ಮದಾನ, ಬೆಳೆ ನಿಮ್ಮದಾನ.
ಸುಳಿದು ಬೀಸುವಗಾಳಿ ನಿಮ್ಮದಾನ,
ನಿಮ್ಮದಾನವನುಂಡು ಅನ್ಯರ ಹೊಗಳುವ
ಕುನ್ನಿಗಳನೇನೆಂಬೆ ರಾಮನಾಥ."

ಭೂಮಿ, ಬೆಳೆ, ಬೀಸುವಗಾಳಿ ಮುಂತಾದುವು ಜೀವನಕ್ಕೆ ಅಗತ್ಯ. ಇವನ್ನೆಲ್ಲ ಭಕ್ತನ ಮೇಲಿನ ಅನುಕಂಪೆಯಿಂದ ಪರಮಾತ್ಮನು ದಯಪಾಲಿಸಿದ್ದಾನೆ. ಈ ಮಹಾದಾನದ ಲಾಭಹೊಂದಿಯೂ ಅವನನ್ನು ಮರೆತು ಮತ್ತೆ ಯಾರನ್ನೋ ಕೀರ್ತಿಸುವ ನಾವು ಕುನ್ನಿಗಳಲ್ಲದೆ ಮತ್ತೇನು ?

" ಕಾಯ ನಿಮ್ಮದಾನ; ಜೀವ ನಿಮ್ಮದಾನ
ಕಾಯ ಜೀವವುಳ್ಳಲ್ಲಿಯೆ ನಿಮ್ಮ ಪೂಜಿಸದ
ನಾಯಿಗಳನೇನೆಂಬೆ–ಹೇಳಾ ರಾಮನಾಥ ?"

ಜೀವ ಕಾಯಗಳು ಶಿವನ ದೇಣಿಗೆಗಳು. ಇವುಗಳನ್ನು ಪಡೆದ ಬಳಿಕ ಅವುಗಳ ಸದುಪಯೋಗವಾಗಬೇಕಷ್ಟೆ. ಪರಮಾತ್ಮನನ್ನು

ಭಕ್ತಿಭಾವದಿಂದ ಭಜಿಸುವುದೇ ಕಾಯ ಜೀವಗಳನ್ನು ಪಡೆದುದರ ಸಾರ್ಥಕ್ಯ.

ಕರುಣಾಸಾಗರನು ಪರಮಾತ್ಮ
"ಎತ್ತು ನಿಮ್ಮ ದಾನ; ಬಿತ್ತು ನಿಮ್ಮ ದಾನ
ಸುತ್ತಿ ಹರಿವ ಸಾಗರವೆಲ್ಲ ನಿಮ್ಮ ದಾನ
ನಿಮ್ಮ ದಾನವನುಂಡು ಅನ್ಯರ ಹೊಗಳುವ
ಕುನ್ನಿಗಳನೇನೆಂಬೆ ರಾಮನಾಥ."

ಜೀವಿಸಲಿಕ್ಕೆಂದು ಎತ್ತು, ಬಿತ್ತು, ನೀರನ್ನು ಅನುಗ್ರಹಿಸಿದ್ದಾನೆ. ಇವಿಲ್ಲದೆ ಬದುಕುವುದು ಕಷ್ಟ. ಪರಮಾತ್ಮನ ಕಾರುಣ್ಯ ಎಂಥದು! ಅಂತಹನನ್ನು ಕೃತಜ್ಞತಾಭಾವದಿಂದ ಪೂಜಿಸದಿದ್ದರೆ ಉಪಕಾರಗೇಡಿಗಳಾಗುತ್ತೇವೆ.

"ಎತ್ತನೇರಿದ ಕರ್ತನೊಬ್ಬನೇ ಜಗಕೆಲ್ಲ
ಎತ್ತು ಬೆಳೆದ ಧಾನ್ಯವನುಂಬ ದೇವರ್ಕಳಿಲ್ಲ ನಿಮ್ಮ
ತೊತ್ತಿನ ಮಕ್ಕಳು ಕಾಣಾ ರಾಮನಾಥ?"

ಈ ಜಗತ್ತಿಗೆ ಪರಮಾತ್ಮನು ಒಬ್ಬನೇ. ಅವನ ವಾಹನವಾಗಿದೆ ಎತ್ತು. ಶಿವನ ಪ್ರಸಾದ ರೂಪವಾದ ಧಾನ್ಯವನ್ನು ಬೆಳೆಯಲಿಕ್ಕೆ ಎತ್ತು ಬೇಕೇ ಬೇಕು. ಇದನ್ನು ಕರುಣಿಸಿದವನನ್ನು ಕುರಿತು ಸ್ತೋತ್ರಮಾಡಲು ಮರೆಯಬಾರದು. ಪರಮಾತ್ಮನು ಘನ ದಯಾಳುವಾದರೂ ಕೃತಘ್ನರಾದವರು ಅವನನ್ನು ನೆನೆಯಲಾರರು. ಸಂಕಟಪರಂಪರೆಗೆ ಸಿಕ್ಕಾಗ ಮಾತ್ರ ಅವನ ನೆನಪಾಗುವುದು.

" ಎಡರಡಸೆ ಮೃಡನಿಪ್ಪ ನೆನೆವರು.
ಎಡರಡಸಿದ ವಿಪತ್ತು ಕಡೆಯಾಗಲೊಡನೆ
ಮೃಡ ನಿಮ್ಮನೆಡಹಿಯೂ ಕಾಣರು ರಾಮನಾಥ. "

ಮಾನವರ ಸ್ವಭಾವವನ್ನು ಬಿಚ್ಚಿ ತೋರಿಸಿದ್ದಾನೆ ಇಲ್ಲಿ ದೇವರ ದಾಸಿಮಯ್ಯ. ಸಂಕಟಕಾಲದಲ್ಲಷ್ಟೇ ಶಿವನ ನೆನಪಾಗುವುದು. ಉಳಿದ ಸಮಯದಲ್ಲಿ ಅವನನ್ನು ಎಡಹಿ ಬಿದ್ದರೂ ಕಣ್ಣೆತ್ತಿ ನೋಡುವದಿಲ್ಲ. ಹೀಗೆ ಜನರ ಸಹಜ ಗುಣವನ್ನು ಹಳಿದಿದ್ದಾನೆ. ಗಾಂಧೀಜಿ ಮರಳಿ ದಕ್ಷಿಣ ಆಫ್ರಿಕೆಗೆ ಹೊರಟಾಗ ಸಮುದ್ರದಲ್ಲಿ ಒಮ್ಮೆಲೆ ಬಿರುಗಾಳಿ ಬೀಸತೊಡಗಿತು. ಹಡಗು ಅಲ್ಲೋಲ ಕಲ್ಲೋಲವಾಗತೊಡಗಿತು. ಆಟಪಾಟ, ಹರಟೆ, ನೃತ್ಯ ಮುಂತಾದವುಗಳಲ್ಲಿ ನಿರತರಾದ ಜನ ಪರಮಾತ್ಮನಲ್ಲಿ ಮೊರೆಯಿಡ ತೊಡಗಿದರು. ಮುಂದೆ ಕೆಲ ಹೊತ್ತಿನ ನಂತರ ಗಾಳಿಯ ರಭಸ ಕಡಿಮೆಯಾಯಿತು. ಎಲ್ಲರೂ ದೇವರ ಸ್ತುತಿಯನ್ನು ಮರೆತರು, ಮತ್ತೆ ಮೊದಲಿನಂತೆ ತಮ್ಮ ಕೆಲಸ ಕಾರ್ಯಗಳಲ್ಲಿ ತೊಡಗಿದರು. ಮಾನವನ ಪ್ರವೃತ್ತಿಯನ್ನು ಅರಿತ ಗಾಂಧೀಜಿ ನೊಂದು ನುಡಿದರು, " ಸಂಕಟ ಕಾಲದಲ್ಲಷ್ಟೆ ವೆಂಕಟರಮಣನ ಸ್ತೋತ್ರ " ಎಂದು. ಜನರ ನಡತೆಯನ್ನು ಬಲ್ಲ ದೇವರದಾಸಿಮಯ್ಯನ ಮೇಲಿನ ವಚನ ಮಾನವರ ಸ್ವಭಾವದ ಕೈಗನ್ನಡಿಯಾಗಿದೆ.

ಪ್ರಾರ್ಥನೆ ಸತ್ಯಶುದ್ಧ ಮನಸ್ಸಿನಿಂದ ಸಾಗಬೇಕು. ಲೋಭಿಗೆ, ವಿಕಾರಿಗೆ, ದೇವರು ಒಲಿಯನು. ಅವರ ಪೂಜೆ ವ್ಯರ್ಥ.

"ಅಡವಿಯಾರಣ್ಯಗಳಲ್ಲಿ ಮಡಿವನಕ ತಪವಿದ್ದು,
ಮಡಿವಾಗ ಮೃಡನ ಮರೆದಡೆ ತುಂಬಿದ ಸಕ್ಕರೆಯ
ಮಡುವಿನೊಳಗೆ ಹೊಕ್ಕಂತೆ ರಾಮನಾಥ."

ಇಡೀ ಆಯುಷ್ಯವನ್ನೆಲ್ಲ ಕಟ್ಟಡವಿಯಲ್ಲಿದ್ದು ಜಪಮಾಡಿ ಕಳೆದು, ಸಾವು ಸಮೀಪವಾದಾಗ ಪರಮಾತ್ಮನ ಧ್ಯಾನ ಮಾಡದಿದ್ದರೆ ಸಕ್ಕರೆ ತೆಗೆದುಕೊಂಡು ನೀರ ಮಡುವಿನಲ್ಲಿ ಹೊಕ್ಕಹಾಗೆ ವ್ಯರ್ಥವಾಗುವದೆಂದು ಆತ ಮಾರ್ಮಿಕವಾಗಿ ತಿಳಿಸಿದ್ದಾನೆ. ಪ್ರಾರ್ಥನೆ ಸದಾ ನಡೆಯಬೇಕು, ಪವಿತ್ರ ಮನಸ್ಸಿನಿಂದ ಸಾಗಬೇಕು. ವಿಕಾರಭಾವದಿಂದ ಸ್ತೋತ್ರ ಮಾಡಿದುದು ಪರಮಾತ್ಮನಿಗೆ ಒಪ್ಪಿಗೆಯಾಗುವದಿಲ್ಲ; ಶ್ರದ್ಧೆಯಿಂದ, ನಿಷ್ಠೆಯಿಂದ ದೇವದೇವನ ಅಸಾಮಾನ್ಯ ಸಾಮರ್ಥ್ಯವನ್ನು, ಉದಾರಭಾವವನ್ನು, ಮನದಲ್ಲಿ ತಂದು ನಾನಾ ಬಗೆಯಾಗಿ ಭಕ್ತನು ಹಾಡಬೇಕು. ದೈವಭಕ್ತಿ ದಿನೇದಿನೇ ಕಡಿಮೆಯಾಗಹತ್ತಿದೆ ಜನರಲ್ಲಿ. ದೇವರ ದಾಸಿಮಯ್ಯನ ಈ ನುಡಿಗಳು ಅದನ್ನು ಪ್ರತಿಯೊಬ್ಬರಲ್ಲಿ ಬೆಳಸುವಂತೆ ಮಾಡುತ್ತವೆ.

## ಜಗದೀಶ್ವರನ ಸ್ವರೂಪ

ಪರಮಾತ್ಮನು ಎಲ್ಲೆಲ್ಲಿಯೂ ತುಂಬಿದ್ದಾನೆ. ಸರ್ವಶಕ್ತನು ಅವನೊಬ್ಬನೆ. ಅವನನ್ನುಳಿದು ಮತ್ತೆ ದೇವರುಗಳಿಲ್ಲ. ದೇವನೊಬ್ಬನೇ ಎಂಬ ವಿಚಾರವನ್ನು ಸಮರ್ಪಕ ರೀತಿಯಲ್ಲಿ ದೇವರ ದಾಸಿಮಯ್ಯನು ತನ್ನ ವಚನಗಳಲ್ಲಿ ಹೇಳಿದ್ದಾನೆ.

"ಮಣಿಗಳ ಸೂತ್ರದಂತೆ ತ್ರಿನಯನ ನೀನಿಪ್ಪೆಯಯ್ಯ
ಎಣಿಸುವಡೆ ತನು ಭಿನ್ನ; ಆತ್ಮನೊಬ್ಬನೆ
ಅಣುರೇಣು ಮಧ್ಯದಲ್ಲಿ, ಗುಣಭರಿತ ನೀನೆಂದು
ಮಣಿವುತಿಪ್ಪೆನಯ್ಯ ರಾಮನಾಥ!"

ಪರಮಾತ್ಮನು ಸರ್ವವ್ಯಾಪಕ; ಆತ ಒಬ್ಬನೇ. ಅವನು ಅಣುವಿನಲ್ಲಿಯೂ ಅಣುವಾಗಿದ್ದಾನೆ. ಹುಲ್ಲು, ಕಟ್ಟಿಗೆಯಲ್ಲಿ ಅಡಗಿದ್ದಾನೆ. ಮುತ್ತಿನ ಹಾರದಲ್ಲಿಯ ದಾರದಂತಿದ್ದಾನೆ. ಆ ಹಾರದಲ್ಲಿಯ ಮಣಿಗಳು ಭಿನ್ನಭಿನ್ನವಾಗಿ ಕಂಡರೂ ಅವುಗಳನ್ನು ಪೋಣಿಸಿದ ದಾರವು ಅವುಗಳನ್ನೆಲ್ಲ ಒಂದುಗೂಡಿಸುತ್ತದೆ. ಹೀಗೆಯೇ ಪ್ರಪಂಚದಲ್ಲಿಯ ಅಸಂಖ್ಯ ಪದಾರ್ಥಗಳು ಬೇರೆ ಬೇರೆ ಕಂಡರೂ ಅವುಗಳಲ್ಲೆಲ್ಲ ತುಂಬಿರುವ ಆತ್ಮನು ಒಬ್ಬನೇ ಆಗಿದ್ದಾನೆ. ವಿಚಾರಿಸಿದರೆ, ತನುಗಳು ಭಿನ್ನ; ಅವುಗಳಲ್ಲೆಲ್ಲ ತುಂಬಿದ ಆತ್ಮನು ಸರ್ವವ್ಯಾಪಿ ಮತ್ತು ಒಬ್ಬನೇ.

ದೇವರ ಸೃಷ್ಟಿಯನ್ನು ಕಂಡಾಗ ಅಗಾಧಪಡದವನಾವನು? ಎಂತಹ ಮರುಳನೂ ಆಶ್ಚರ್ಯಹೊಂದದೇ ಇರನು.

"ಶರಧಿಯ ಮೇಲೆ ಧರೆಯ ಕರಗದಂತಿರಿಸಿದೆ.
ಅಂಬರಕ್ಕೆ ಗದ್ದುಗೆ ಬೋದುಗೆ ಇಲ್ಲದಂತಿರಿಸಿದೆ.
ಎಲೆ ನೃಡನೆ, ನೀನಲ್ಲದೆ ಉಳಿದ ದೈವಂಗಳಿಗಹುದೆ
ರಾಮನಾಥ?"

ಸಾಗರಗಳು ಭೂಮಿಯನ್ನು ಸುತ್ತಿವೆಯಾದರೂ ಭೂಮಿ ನೀರಲ್ಲಿ ಕರಗದೆ ಉಳಿದಿದೆ. ಮಹತ್ತಾದ ಆಕಾಶ, ಗದ್ದುಗೆ,

ಬೋದುಗೆಗಳಿಲ್ಲದೆ ನಿಂತಿದೆ. ಈ ಚಮತ್ಕಾರಗಳು ದೇವದೇವನ ಸಾಮರ್ಥ್ಯವನ್ನು ಸಾರುತ್ತವೆ. ಅನ್ಯ ಕಿರುಕುಳ ದೇವರಿಗೆ ಇದನ್ನು ಮಾಡಲು ಸಾಧ್ಯವೇ ಇಲ್ಲ.

"ಸರ್ಪನೂ ಕೂರ್ಮನೂ ದಿಕ್ಕರಿಗಳೆಂಟೂ
ಭೂಮಿಯ ಹೊತ್ತಿದ್ದಹರೆಂಬರು.
ಅಹರ್ನಿಶ ಹೊತ್ತಿಪ್ಪರಿಗೆ ಅತ್ತಲಾವಾಧಾರ?
ಇತ್ತಲಾವಾಧಾರ?
ಉತ್ತರಗುಡುವವರಿಗೆ ಇಕ್ಕುವೆ ಮುಂಡಿಗೆಯ,
ಎತ್ತುವರುಳ್ಳರೆ ತೋರಿರೈ, ರಾಮನಾಥ."

ವಚನಕಾರ ದೇವರದಾಸಿಮಯ್ಯನು ಭೂಮಿಯನ್ನು, ಅಷ್ಟ ದಿಗ್ಗಜಗಳು, ಆಮೆ, ಸರ್ಪ ಹೊತ್ತಿರುವವೆಂಬ ಗೊಡ್ಡು ವಿಚಾರ ವನ್ನು ಒಪ್ಪುವದಿಲ್ಲ. ಇವುಗಳಲ್ಲಿ ಆಧಾರವಾದ ಪರಮಶಕ್ತಿ ಯೊಂದಿದೆ; ಅದೇ ಪರಮಾತ್ಮ. ಅವನಿಂದ ಈ ಜಗತ್ತು ನಡೆ ದಿದೆಯೆಂಬುದು ಅವನ ಸ್ಪಷ್ಟ ವಿಚಾರ.

ಪರಮಾತ್ಮನು ಸೃಷ್ಟಿಯಲ್ಲೆಲ್ಲ ಹೇಗೆ ವ್ಯವಹರಿಸುತ್ತಾನೆಂಬು ದನ್ನು ದೇವರದಾಸಿಮಯ್ಯನು ವಿವರಿಸುತ್ತಾನೆ.

"ಮರದೊಳಗೆ ಮಂದಾಗ್ನಿಯ ಉರಿಯದಂತಿರಿಸಿದೆ.
ನೊರೆವಾಲೊಳಗೆ ತುಪ್ಪವ ಕಂಪಿಲ್ಲದಂತಿರಿಸಿದೆ.
ಶರೀರದೊಳಗೆ ಆತ್ಮನ ಆರೂ ಕಾಣದಂತಿರಿಸಿದೆ.
ನೀನು ಬೆರಸಿದ ಭೇದಕ್ಕೆ ಬೆರಗಾದೆನಯ್ಯಾ ರಾಮನಾಥ."

ಸ್ವಾನುಭವದ ಸುಂದರ ಶೈಲಿಯಲ್ಲಿ ದೇವರದಾಸಿಮಯ್ಯನು ಪರಮಾತ್ಮನ ಕಾರ್ಯಚಾತುರ್ಯವನ್ನು ಕಂಡು ಬೆರಗಾಗಿ ಬಣ್ಣಿಸಿದ್ದಾನೆ. ಪರಮಾತ್ಮನು ಜಗತ್ತಿನಲ್ಲಿ ಹೇಗೆ ಬೆರೆತಿದ್ದಾನೆಂಬುದನ್ನು ಹೇಳುವುದು ಅಸಾಧ್ಯ. ಆದರೂ ಕೆಲಮಟ್ಟಿಗೆ ಈ ವಿಷಯದ ಅರಿವು ಮಾಡಿಕೊಡಬೇಕೆಂಬ ಸದುದ್ದೇಶದಿಂದ ಕೆಲವು ಉದಾಹರಣೆಗಳನ್ನು ಕೊಟ್ಟಿದ್ದಾನೆ. ಮರದಲ್ಲಿ ಬೆಂಕಿ ಹೇಗೆ ಅಡಗಿದೆಯೋ, ನೊರೆಹಾಲಲ್ಲಿ ತುಪ್ಪ ತನ್ನ ಕಂಪನ್ನು ಹೇಗೆ ಅಡಗಿಸಿಟ್ಟುಕೊಂಡಿದೆಯೋ ಹಾಗೆ ಸೃಷ್ಟಿಯಲ್ಲೆಲ್ಲ ಪರಮಾತ್ಮನು ಆತ್ಮಸ್ವರೂಪನಾಗಿ ಪ್ರಕಟವಾಗದೆ ಇದ್ದಾನೆಂದು ಈ ವಚನದಲ್ಲಿ ತಿಳಿಸಿದ್ದಾನೆ. ಲೋಕದಲ್ಲಿರುವ ಜನರಿಗೆ ಈ ಭೇದದ ತಿಳಿವಳಿಕೆಯಾಗುವುದು ಅಸಾಧ್ಯ.

ಶಿವನು ಜಗತ್ತಿನಲ್ಲಿ ಹುದುಗಿದ್ದರೂ ಅವನ ಶ್ರೇಷ್ಠಗುಣಗಳು ಆಯಾ ವಸ್ತುಗಳಿಗೆ ಬರಲಾರವು. ಆ ಪದಾರ್ಥಗಳು ತಮ್ಮ ಸ್ವಭಾವದಂತೆಯೇ ಇರುತ್ತವೆ. ಇದರ ಬಗೆಗೆ ದೇವರದಾಸಿಮಯ್ಯನು ಕೆಲವು ಉದಾಹರಣೆಗಳನ್ನು ಕೊಟ್ಟು ತಿಳಿಸುತ್ತಾನೆ.

"ಎಣ್ಣೆಯಿರ್ದ್ದ ಎಳ್ಳು ನೆನೆಯದ ಭೇದವ,
ಕಿಚ್ಚಿದ್ದು ಕಲ್ಲು ಸಿಡಿಯದ ಭೇದವ,
ಕಾಮವಿರ್ದ್ದ ಕನ್ನೆಯ ಅನುಭವಿಸದ ಭೇದವ,
ಪರವಿರ್ದ್ದ ಪ್ರಾಣ ಪ್ರಕೃತಿಯೊಳಡಗಿದ ಭೇದವ,
ಲೋಕದ ಜಡರೆತ್ತ ಬಲ್ಲರೈ ರಾಮನಾಥ."

ಎಳ್ಳಿನಲ್ಲಿ ಎಣ್ಣೆಯಿದ್ದರೂ ಆ ಎಳ್ಳು ಅದರಲ್ಲಿ ನೆನೆಯದೆ ಇರು ತ್ತದೆ. ಕಲ್ಲಿನಲ್ಲಿ ಕಿಚ್ಚು ಇರುತ್ತದೆ. ಆದರೆ ಆ ಕಿಚ್ಚು ಕಲ್ಲನ್ನು ಸುಡುವದಿಲ್ಲ; ಸಿಡಿಯುವಂತೆ ಮಾಡುವದಿಲ್ಲ. ಹಾಗೆಯೇ ಪರ ಮಾತ್ಮನೆಂಬ ಶ್ರೇಷ್ಠ ವಸ್ತುವು ಎಲ್ಲ ಪದಾರ್ಥಗಳಲ್ಲಿದ್ದರೂ ಅವುಗಳ ಗುಣ ಸ್ವಭಾವವನ್ನು ಅಡಗಿಸದೆ ಅವುಗಳಲ್ಲಿದ್ದಾ ನೆಂದು ದೇವರದಾಸಿಮಯ್ಯನು ಅಭಿಪ್ರಾಯಪಟ್ಟಿದ್ದಾನೆ. ಇದೇ ವಿಚಾರವನ್ನು ಅವನು ಇನ್ನೊಂದು ಸುಂದರವಾದ ವಚನದಲ್ಲಿ ವಿವರಿಸಿದ್ದಾನೆ.

> "ಒಡಲೊಳಗಿನ ಕಿಚ್ಚು ಒಡಲ ಸುಡದ ಭೇದವ,
> ಕುಡಿದ ಉದಕದಲ್ಲಿ ಆ ಕಿಚ್ಚು ನಂದದ ಭೇದವ,
> ಮೃಡ ನೀ ಪ್ರಾಣಪ್ರಕೃತಿಯೊಳಡಗಿದ ಭೇದವ,
> ಲೋಕದ ಜಡರೆತ್ತ ಬಲ್ಲರೈ ರಾಮನಾಥ"

ದೇಹದಲ್ಲಿ ಪಚನಾಗ್ನಿಯಿದೆ. ಅದು ಶರೀರಕ್ಕೆ ಬಾಧೆ ಮಾಡುವ ದಿಲ್ಲ. ಆ ಅಗ್ನಿಯನ್ನು ಶಾಂತಮಾಡಲು ನೀರನ್ನು ಕುಡಿಯು ತ್ತೇವೆ. ಆದರೆ ಆ ಬೆಂಕಿ ನಂದಿ ಹೋಗುವದಿಲ್ಲ. ಜಗತ್ತಿನಲ್ಲಿ ನಾನಾ ಪ್ರಕಾರದ ರೂಪಾಂತರಗಳು ಕಂಡು ಬಂದರೂ ಅಲ್ಲಿರುವ ಪರಮಾತ್ಮನೆಂಬ ಸುವಸ್ತುವು ಯಥಾವತ್ತಾಗಿಯೇ ಇರುತ್ತದೆ, ಶಾಶ್ವತವಾಗಿರುತ್ತದೆ. ಇದನ್ನು ಜ್ಞಾನಿಗಳು ಮಾತ್ರ ಬಲ್ಲರು. ಲೋಕದಲ್ಲಿರುವ ಅಜ್ಞಾನಿಗಳಿಗೆ ಖಂಡಿತ ಗೋಚರವಾಗುವ ದಿಲ್ಲ.

# ಶ್ರದ್ಧಾ ಭಕ್ತಿ

ಭಕ್ತನು ಗುರು ಕರುಣೆಗೆ ಪಾತ್ರನಾಗಬೇಕು.

"ಉರಿವ ಕೆಂಡದ ಮೇಲೆ ತೃಣವ ತಂದಿರಿಸಿದರೆ,
ಆ ತೃಣವನಾ ಕೆಂಡ ನುಂಗಿದಂತೆ,
ಗುರುಚರಣದ ಮೇಲೆ, ತನುವೆಂಬ ತೃಣವ
ತಂದಿರಿಸಿದರೆ
ಆತನ ಸರ್ವಾಂಗವೆಲ್ಲ ಲಿಂಗ ಕಾಣಾ ರಾಮನಾಥ."

ಕೆಂಡದ ಮೇಲೆ ಹುಲ್ಲುಕಡ್ಡಿಯನ್ನಿರಿಸಿದರೆ ಅದು ಸುಟ್ಟು ಬೆಂಕಿಯಲ್ಲಿ ಒಂದಾಗುವುದು, ತನ್ನ ಸ್ವರೂಪವನ್ನು ಬದಲಿಸಿಕೊಳ್ಳುವುದು. ಗುರುಚರಣವೆಂಬ ಅಗ್ನಿಯ ಮೇಲೆ ಈ ದೇಹವೆಂಬ ಹುಲ್ಲುಕಡ್ಡಿಯನ್ನಿರಿಸಿದರೆ ಅದು ತನ್ನ ಸ್ವರೂಪವನ್ನು (ಕಳೆದುಕೊಂಡು) ಬದಲಿಸಿಕೊಳ್ಳುವುದು. ಗುರುಚರಣವೆಂಬ ಅಗ್ನಿಯ ಮೇಲೆ ಈ ದೇಹವೆಂಬ ಹುಲ್ಲುಕಡ್ಡಿಯನ್ನಿರಿಸಿದರೆ, ಅದು ತನ್ನ ಸ್ವರೂಪವನ್ನು ಕಳೆದುಕೊಂಡು ಪ್ರಕಾಶಮಯವಾಗಿ ತೊಳಗಹತ್ತುವುದು.

ಗುರುಶಿಷ್ಯರು ಉಚ್ಚವೃತ್ತಿಯವರಾಗಿರಬೇಕು.

"ಹೊಲಬನರಿಯದ ಗುರುವು, ಸುಲಭನಲ್ಲದ ಶಿಷ್ಯನ
ಕೆಲಬಲನ ನೋಡಿ ವಿಚಾರಿಸಿ ಮಾಡದುಪದೇಶ,
ಅಂಧಕನ ಕೈಯ ಅಂಧಕ ಹಿಡಿದಂತೆ ಕಾಣಾ
ರಾಮನಾಥ."

ಗುರುವು ಜ್ಞಾನಸಮಯನಾಗಿರಬೇಕು. ಶಿಷ್ಯನು ಆ ಜ್ಞಾನವನ್ನು ತಿಳಿಯುವ ಶಕ್ತಿಯುಳ್ಳವನಾಗಿರಬೇಕು. ಹೀಗಿರದಿದ್ದಲ್ಲಿ ಶಿಷ್ಯನಿಗೆ ಗುರುವು ಮಾಡಿದ ಉಪದೇಶ ವ್ಯರ್ಥವಾಗುತ್ತದೆ. ಒಬ್ಬ ಕುರುಡನು ಮತ್ತೊಬ್ಬ ಕುರುಡನ ಕೈಯನ್ನು ಹಿಡಿದು ನಡೆದಂತೆ ಅಪಹಾಸ್ಯಕ್ಕೆ ಕಾರಣವಾಗುವುದು. ಭಕ್ತಿಯುಳ್ಳವರು ಪರಮಾತ್ಮನಲ್ಲಿ ವಿಶ್ವಾಸವಿರಿಸಿ ನಡೆಯಬೇಕು.

"ಜ್ವರವಿಡಿದ ಬಾಯಿಗೆ ನೊರೆವಾಲು ಒಲಿವುದೆ ?
ನರಕದಲ್ಲಿ ಬೀಳುವ ಮನುಜರಿಗೆ,
ಹರಭಕ್ತಿಯೆಂಬುದು ಕರಗಹಿ ಕಾಣಾ ರಾಮನಾಥ."

ರೋಗಿಯಾದವನಿಗೆ ರುಚಿಕರವಾದ ನೊರೆವಾಲು ಸೇರುವದಿಲ್ಲ. ಪರಮಾತ್ಮನಲ್ಲಿ ಭಕ್ತಿಯೆಂಬುದು ಕೆಟ್ಟ ಕೆಲಸದಲ್ಲಿ ತೊಡಗಿದವರಿಗೆ ವಿಶೇಷ ಕಹಿಯಾಗಿ ತೋರುತ್ತದೆ.

"ಕತ್ತೆ ಬಲ್ಲುದೆ ಕಸ್ತುರಿಯ ವಾಸನೆಯ ?
ತೊತ್ತು ಬಲ್ಲಳೆ ಗುರುಹಿರಿಯರುತ್ತಮರೆಂಬುದ ?
ಭಕ್ತಿಯನರಿಯದ ವ್ಯರ್ಥಜೀವಿಗಳು,
ನಿಮ್ಮನೆತ್ತ ಬಲ್ಲರೈ ರಾಮನಾಥ ?"

ಕತ್ತೆ ಮತ್ತು ತೊತ್ತುಗಳು ತಮ್ಮ ಬಳಿಯಿರುವ ಅಮೂಲ್ಯ ವಸ್ತುಗಳ ಬೆಲೆಯನ್ನು, ನಿಜಸ್ಥಿತಿಯನ್ನು ತಿಳಿಯುವದಿಲ್ಲ. ಹಾಗೆಯೇ ಭಕ್ತಿಯನ್ನು ತಿಳಿಯದ ಮಾನವರು ತಮ್ಮಲ್ಲಿಯೇ ಇರುವ ಪರಮಾತ್ಮನ ನಿಜ ಸ್ವರೂಪವನ್ನು ತಿಳಿಯಲಾರರು. ಅವರ ಜೀವನ ವ್ಯರ್ಥ.

ಶ್ರದ್ಧಾಭಕ್ತನಲ್ಲಿ ಒಂದು ವಿಶೇಷ ಶಕ್ತಿಯಿರುತ್ತದೆ. ಅವನಿಗೆ ಶಿವನು ಒಲಿದು ಕರೆದಾಗ ಬರುತ್ತಾನೆ:

"ನೆರೆನಂಬಿ ಕರೆದರೆ, ನರಿ, ಕುದುರೆಯಾಗಿ ಹರಿಯನೆ ?
ಜಗವೆಲ್ಲ ಅರಿಯಲು ತೊರೆಯೊಳಗೆ ಬಿದ್ದ ಲಿಂಗ,
ಕರೆದರೆ ಬಂದುದು ಕರಸ್ಥಳಕ್ಕೆ,
ನಂಬದೆ ಕರೆದವರ ಹಂಬಲನೊಲ್ಲ ನಮ್ಮ ರಾಮನಾಥನು"

ನಂಬಿ ಕರೆದರೆ ಶಿವನು ನರಿ ಕುದುರೆಯಾಗಿ ಬರುತ್ತಾನೆ. ನಂಬಿಕೆಯಿಲ್ಲದೆ ಪೂಜಿಸುವವರನ್ನು ಕಣ್ಣೆತ್ತಿಯೂ ನೋಡುವದಿಲ್ಲ. ನಂಬಿ ಪೂಜಿಸುತ್ತಿದ್ದ ಕೊಂಡಕುಳಿ ಕೇಶಿರಾಜನು ತೊರೆಯಲ್ಲಿ ಬಿದ್ದ ಲಿಂಗವನ್ನು ಕರೆಯಲು ಬಂದಿತೆಂದು ಉದಾಹರಣೆಯಿಂದ ತಿಳಿಸಿದ್ದಾನೆ. ಕೊಂಡಕುಳಿ ಕೇಶಿರಾಜನ ಈ ಸವಾಡವು ದೇವರದಾಸಿಮಯ್ಯನಿಗೆ ತಿಳಿದಿತ್ತು. ಇದರಿಂದ ಶ್ರದ್ಧಾಭಕ್ತಿಯ ಮಹತ್ವ ನಮಗಾಗುವುದು.

ದುಷ್ಟನು ಮಾಡುವ ಭಕ್ತಿ ದಿಟವಾದುದಲ್ಲ.
"ಬರು ಶಠಗನ ಭಕ್ತಿ ದಿಟವೆಂದು ನೆಚ್ಚಲುಬೇಡ,
ಮಠದೊಳಗಿನ ಬೆಕ್ಕು ಇಲಿಯಕಂಡು,
ಪುಟನೆಗೆದಂತಾಯಿತ್ತು ಕಾಣಾ ರಾಮನಾಥ."

ಬೆಕ್ಕು ಮಠದಲ್ಲಿದ್ದರೇನು ? ಅದು ತನ್ನ ಮುನ್ನಿನ ಸ್ವಭಾವವನ್ನು ಎಲ್ಲಿದ್ದರೂ ಬಿಡುವದಿಲ್ಲ. ಇಲಿಯೊಂದನ್ನು ಕಂಡರೆ ಅದು ಹಾರಿ ಹಿಡಿಯುತ್ತದೆ. ಹಾಗೆಯೆ ಸ್ವಭಾವತಃ ದುಷ್ಟನಾದವನು ಕೆಟ್ಟದ್ದಕ್ಕೆಳಸುತ್ತಾನೆ. ಎಷ್ಟು ದಿನ ಭಕ್ತಿಮಾಡಿ

ದರೂ ತನ್ನ ಹುಟ್ಟು ಸ್ವಭಾವವನ್ನು ಬಿಡುವದಿಲ್ಲ. ಮಾರ್ಮಿಕ ವಾದ ಉದಾಹರಣೆಯಿಂದ ಈ ವಿಷಯವನ್ನು ತಿಳಿಸಿದ್ದಾನೆ ದಾಸಿಮಯ್ಯ.

ಡಂಭಾಚಾರಿಗಳನ್ನು ವಚನಕಾರರು ವಿಶೇಷವಾಗಿ ಹಳಿ-ದಿದ್ದಾರೆ. ದೇವರದಾಸಿಮಯ್ಯನು ಇಂತಹರನ್ನು ಸೇರುವದಿಲ್ಲ. ವೇಷ ಭೂಷಣಕ್ಕೆ ಮಾರುಹೋಗಬಾರದೆಂದು ಅತ ಎಚ್ಚರಿಸಿ ದ್ದಾನೆ.

"ಹಂದಿ ಶ್ರೀಗಂಧವ ಪೂಸಿದಡೇನು, ಗಂಧರಾಜನಾಗ
ಬಲ್ಲುದೆ ?
ನವಿಲು ನಲಿಯುತ್ತಿಂದಡೆ, ಕಾಡಕೋಳಿ ಪುಚ್ಚವ ತೆರ
ಕೊಂಡಂತೆ
ಕರ್ಮಿಗಳ ಭಕ್ತಿ, ಹೊರವೇಷದಲ್ಲಿ ವಿಭೂತಿ,
ರುದ್ರಾಕ್ಷಿಯ ಪೂಸಿದಡೇನು ?
ತೆರನನರಿದು ಮರವೆಯ ಕಳೆದು, ಮಾತಿನಂತೆ
ನೀತಿಯುಳ್ಳಡೆ
ಅವರನಜಾತರೆಂಬೆ ಕಾಣಾ ರಾಮನಾಥ."

ವಿಭೂತಿ ರುದ್ರಾಕ್ಷಿಗಳನ್ನು ಧರಿಸಿ ಜ್ಞಾನವಿಲ್ಲದೆ ಆಚರಿಸಿದರೆ ಅದು ವ್ಯರ್ಥ. ನುಡಿಗೂ ನಡೆತೆಗೂ ಅಂತರವಿರಕೂಡದು. ಆಡುವದೊಂದು, ಆಚರಣೆ ಇನ್ನೊಂದು ಆದವರನ್ನು ದೇವರ-ದಾಸಿಮಯ್ಯನು ಖಂಡಿಸಿದ್ದಾನೆ. ಆಚರಣೆಗೆ ಮಹತ್ವ ಕೊಟ್ಟಿದ್ದಾನೆ. ಒಳ್ಳೆನಡತೆಯಿಲ್ಲದವರು ಶ್ರೀಗಂಧವನ್ನು ಲೇಪಿಸಿ

ಕೊಂಡ ಹಂದಿಗಳಂತೆ, ನವಿಲಂತೆ ಕುಣಿಯಲು ಪ್ರಯತ್ನಿಸುವ ಕಾಡಕೋಳಿಗಳಂತೆ. ಬಾಹ್ಯ ವೇಷಭೂಷಣಕ್ಕೆ ಮರ್ಯಾದೆ ಕೊಡುವವರನ್ನು ನಿಷ್ಠುರವಾಗಿ ಟೀಕಿಸಿದ್ದಾನೆ.

ಹೀನ ಬಯಕೆಯುಳ್ಳ ಭಕ್ತನನ್ನು ದಾಸಿಮಯ್ಯ ಬಲು ನವಿರಾದ ಹಾಸ್ಯದಿಂದ ಟೀಕಿಸಿದ್ದಾನೆ.

> "ಹರಿದ ಗೋಣಿಯಲೊಬ್ಬ ಕಳವೆಯ ತುಂಬಿದ
> ಇರುಳೆಲ್ಲ ನಡೆದನಾ ಸುಂಕಕ್ಕಂಜಿ
> ಕಳವೆಯೆಲ್ಲಾ ಹೋಗಿ ಬರಿಯಗೋಣಿ ಉಳಿಯಿತ್ತು!
> ಅಳಿಮನದವನ ಭಕ್ತಿಯಂತಾಯಿತ್ತು ರಾಮನಾಥ."

ಕಪಟ ಭಕ್ತನ ಸ್ಥಿತಿಯನ್ನು ಅವನು ಇಲ್ಲಿ ಬಹಳ ಸ್ವಾರಸ್ಯಕರವಾಗಿ ಹೇಳಿದ್ದಾನೆ. ದುಡಿಯದೆ ಎರಡನೆಯವರ ದ್ರವ್ಯಕದ್ದು ಉಪಜೀವಿಸುವವನಂತೆ ಇಂಥವರ ಸ್ಥಿತಿಯೆಂದು ಬಣ್ಣಿಸಿದ್ದಾನೆ. ಕಳ್ಳನೊಬ್ಬ ತಾನು ಮುನ್ನಾದಿನ ಕದ್ದ ಹಣವನ್ನು ಹರಕು ಗೋಣಿಯಲ್ಲಿ ತುಂಬಿ ಸುಂಕಕೊಡಬಾರದೆಂದು ರಾತ್ರಿಯೆಲ್ಲಾ ನಡೆದು ಹೋಗುತ್ತಾನೆ. ಹರಕು ಗೋಣಿಯಿಂದ ಅವನ ಸಂಪಾದನೆಯಲ್ಲ ಸೋರಿ ಹೋಗುತ್ತದೆ. ಹೀನ ಮನಸ್ಸಿನಿಂದ ಭಜಿಸುವವನ ರೀತಿ ಇದಕ್ಕೆ ಸಮಾನವಾಗುತ್ತದೆ. ಕೀಳು ಮನ ಹರಿದ ಗೋಣಿಗೆ ಸಮಾನ.

ನಿಜವಾದ ಭಕ್ತರು ಬಹಳ ವಿರಳ:—

> "ತೀವಿ ಕುಳ್ಳಿರ್ದ ಸಭೆ ಈಯಬಲ್ಲುದೆ?
> ಕಾವರೆ ಸಂಗ್ರಾಮಕ್ಕೆ ಹೋದವರೆಲ್ಲ?

ಇರಿಯಬಲ್ಲರೆ ನೂರಕ್ಕೊಬ್ಬ, ಸಹಸ್ರಕ್ಕೊಬ್ಬ.
ಹುಣಿಸೆಯ ಹೂವೆಲ್ಲ ಕಾಯಾಗಬಲ್ಲುದೆ ರಾಮನಾಥ? ’

ಯುದ್ಧಕ್ಕೆ ಹೋಗುವವರೆಲ್ಲ ಜೀವದ ಹಂಗುದೊರೆದು ಕಾದಾ
ಡುವದಿಲ್ಲ. ಅಂಥವರು ಬಹಳ ಕಡಿಮೆ ಜನರು. ನೂರಕ್ಕೆ
ಇಲ್ಲವೆ ಸಹಸ್ರಕ್ಕೆ ಒಬ್ಬನಾದರೂ ಸಿಗುವನೋ ಇಲ್ಲವೋ
ಎಂಬುದು ಸಂದೇಹ. ಮರದ ತುಂಬೆಲ್ಲ ಹುಣಿಸೆಯ ಹೂವಾ
ಗಿದ್ದರೂ ಅವೆಲ್ಲ ಕಾಯಾಗಲಾರವು. ಉದುರಿ ಹೋಗುವುದೆ
ಹೆಚ್ಚು. ಹಾಗೆ ಪ್ರಪಂಚದಲ್ಲಿ ಮಾನವರು ಬೇಕಾದಷ್ಟಿದ್ದರೂ
ನಿಜವಾದ ಭಕ್ತರು ಮಾತ್ರ ಬಹಳ ವಿರಳ.

## ದಾಸಿಮಯ್ಯನ ನೀತಿ

ನಮ್ಮ ಹಿರಿಯರು ಧರ್ಮ ಮತ್ತು ನೀತಿಗಳನ್ನು ಪರಸ್ಪರ
ವಿಂಗಡಿಸುವದಿಲ್ಲ. ಪರದೇಶದವರು ನೀತಿಯೆಂದರೆ ಬಹು
ಜನರಿಗೆ ಪ್ರಯೋಜನಕಾರಿಯಾದುದು, ಸಮಾಜದ ಹಿತಕ್ಕೆಂದು
ಬಹಳ ಜನರು ಒಕ್ಕಟ್ಟಿನಿಂದ ಇರುವುದು ಎಂದು ಅರ್ಥಮಾಡಿ
ತಮ್ಮ ನೈತಿಕ ವಿಚಾರಗಳನ್ನು ವಿವೇಚಿಸುತ್ತಾರೆ. ಇದು
ಸ್ವಾರ್ಥದಿಂದ ಕೂಡಿದುದು ಆಗುವುದು. ನಮ್ಮವರ ವಿಚಾರ
ಗಳು ಇದಕ್ಕೆ ತೀರ ಭಿನ್ನವಾಗಿವೆ. ನೀತಿ ಮತ್ತು ಧರ್ಮಗಳು
ಬೇರೆ ಬೇರೆಯಲ್ಲ; ಅನ್ಯೋನ್ಯ ಸಂಬಂಧವುಳ್ಳವು. ಇಂದು
ನೈತಿಕ ಪತನ ಎಲ್ಲೆಲ್ಲಿಯೂ ಕಾಣತೊಡಗಿದೆ. ಇಂತಹ
ಸಂದರ್ಭಲ್ಲಿ ದೇವರದಾಸಿಮಯ್ಯನ ವಚನಗಳು ಮಾರ್ಗದರ್ಶಿ

ವಾಗುತ್ತವೆ. ಅವರು ನೀತಿಗೆ ಎಂತಹ ಮಹತ್ವವಿತ್ತಿದ್ದ-ರೆಂಬುದನ್ನು ಮನಗಾಣಬಹುದು.

ಸರ್ವಪ್ರಾಣಿಗಳಲ್ಲಿ ದಯಾಪರನಾಗಿರಬೇಕು ಮಾನವ. ಹಿಂಸಾವೃತ್ತಿ ಸಲ್ಲದು. ಒಳ್ಳೇ ಗುಣದ ಅಸ್ತಿತ್ವದ ಮೇಲೆಯೇ ಅಹಿಂಸೆ, ಪ್ರೀತಿ, ಮಿತ್ರತ್ವ, ಸಭ್ಯವರ್ತನೆ ಮುಂತಾದವು ಅವಲಂಬಿಸಿವೆ. ಪ್ರಪಂಚದಲ್ಲಿರುವವರೆಲ್ಲರನ್ನೂ ಪ್ರೀತಿಯಿಂದ ಕಾಣಬೇಕೆಂಬುದು ದೇವರದಾಸಿಮಯ್ಯನ ವಿಚಾರ.

"ನಾನೊಂದು ಸುರಿಗೆಯನೇನೆಂದು ಹಿಡಿವೆನು ?
ಏನ ಕಿತ್ತೇನನಿರಿವೆನು ? ಜಗವೆಲ್ಲಾ ನೀನಾಗಿಪ್ಪೆ
ಕಾಣಾ ರಾಮನಾಥ."

ಪರಮಾತ್ಮನು ಎಲ್ಲೆಲ್ಲಿಯೂ ತುಂಬಿದ್ದಾನೆ. ಅಂತಹ ಶ್ರೇಷ್ಠನು ಎಲ್ಲರಲ್ಲಿಯೂ ಇರುವುದರಿಂದ ಖಡ್ಗ ಹಿಡಿಯುವುದು, ಹಿಂಸೆ ಮಾಡುವುದು ಯಾವ ಉದ್ದೇಶ ಸಾಧಿಸುವದಕ್ಕಾಗಿರಬೇಕು ? ಕೊಲ್ಲುವುದು ಪಾಪ. ಅಂತು ವರ್ತಿಸುವುದು ಅಪರಾಧ. ಸಾಕ್ಷಾತ್ ಶಿವನನ್ನೇ ನೋಯಿಸಿದಂತೆ. ನೈತಿಕ ಆಚರಣೆಗೆ ಮನುಷ್ಯ ತಾನೆ ಜವಾಬುದಾರನು; ಎರಡನೆಯವರಲ್ಲ.

"ಹೊಲೆಯರ ಬಾವಿಯಲೊಂದು ಎಲು ನೆಟ್ಟಿದ್ದರೆ
ಹೊಲೆ ಹೊಲೆಯೆಂಬುದೀ ಲೋಕವೆಲ್ಲ.
ಹಲುವೆಲುವಿದ್ದ ಬಾಯಲ್ಲಿ ಒಲವರವ ನುಡಿದರೆ
ಅದು ಹೊಲೆಯರ ಬಾವಿಂದ ಕರಕಷ್ಟ ಕಾಣಾ
ರಾಮನಾಥ."

ಸದ್ಭಕ್ತರ ಸಂಗ ಮಾಡಬೇಕು. ಅವರು ವಿನಯ ಸಂಪನ್ನ ರಾಗಿರಬೇಕು. ಶರಣರಿಗೆ ತೊತ್ತಾಗಿರಬೇಕು. ಅಂತಹರ ಸಹವಾಸ ಸುಖಕರವಾದುದು. ಅಹಂಕಾರದಿಂದ ವರ್ತಿಸುವುದು ತ್ಯಾಜ್ಯವಾದುದೆಂದು ದಾಸಿಮಯ್ಯನ ಮತ.

## ದಾಸಿಮಯ್ಯನ ದೃಷ್ಟಿಯಲ್ಲಿ ಸ್ತ್ರೀ

ಸ್ತ್ರೀಯನ್ನು ಗೌರವಿಸುವ ಸಮಾಜ ಉನ್ನತವಾದುದು, ಮನ್ನಣೆಗೆ ಪಾತ್ರವಾದುದು. ಎಲ್ಲಿ ಸ್ತ್ರೀಯರು ಪೂಜೆಗೊಳ್ಳು ವರೊ ಅಲ್ಲಿ ದೇವರು ವಾಸಮಾಡುತ್ತಾನೆ. ಶರಣರು ಸ್ತ್ರೀಯ ರಿಗೆ ಬಹಳ ಮರ್ಯಾದೆಯನ್ನು ಸಲ್ಲಿಸಿದ್ದಾರೆ. ಪುರುಷನಿಗೆ ಯಾವ ದೃಷ್ಟಿಯಲ್ಲಿಯೂ ಅವರು ಕಡಿಮೆಯಲ್ಲವೆಂದು ಸಾರಿ ಹೇಳಿದ ಕೀರ್ತಿ ಶರಣರಿಗೆ ಸದಾ ಸಲ್ಲುತ್ತದೆ. ದಾಸಿಮಯ್ಯನು ಹೆಣ್ಣುಮಕ್ಕಳನ್ನು ಪೂಜ್ಯಭಾವನೆಯಿಂದ ಕಂಡಿದ್ದಾನೆ. ಅವರ ಬಗೆಗೆ ಉಚ್ಚವಿಚಾರವುಳ್ಳವನಾಗಿದ್ದಾನೆ.

ಸತಿಪತಿಗಳು ಸಮರಸದಿಂದಿರಬೇಕು. ಅದು ಶಿವನಿಗೆ ಪ್ರಿಯವಾದುದಾಗುವುದು.

"ಸತಿ ಪತಿಗಳೊಂದಾದ ಭಕ್ತಿ ಹಿತವಾಗಿಪ್ಪುದು ಶಿವಂಗೆ,
ಸತಿ ಪತಿಗಳೊಂದಾಗದವನ ಭಕ್ತಿ ಅಮೃತದೊಳು
ವಿಷವೆರೆದಂತೆ ಕಾಣಾ ರಾಮನಾಥ."

ಪರಸ್ಪರ ಸಹಕಾರದಿಂದ ಬಾಳುವ ದಾಂಪತ್ಯ ಜೀವನ ಶಿವನಿಗೆ ಪ್ರಿಯವಾಗುವುದು. ಹಾಗಿರದಿದ್ದರೆ ಅಮೃತದಲ್ಲಿ ವಿಷ

ಬೆರೆಸಿದಂತೆ ವ್ಯರ್ಥವಾಗುವುದು. "ಸತಿಪತಿಗಳೊಂದಾಗದವನ ಭಕ್ತಿ" ಎಂಬ ಮಾತುಗಳಲ್ಲಿ ದಾಸಿಮಯ್ಯನು ಕಾವ್ಯದ ಜೀವವಾದ ಧ್ವನಿಯನ್ನು ತುಂಬಿದ್ದಾನೆ. ಸತಿ-ಪತಿಗಳು ಒಂದಾಗಲು ಅಡ್ಡಿ ಬರುವುದು ಪತಿಯಿಂದಲೇ ಎಂದೂ, ಸತಿಪತಿಗಳು ಒಂದಾಗದಂತೆ ತಾನು ಅಡ್ಡಿಯಾಗದೆ ತನ್ನ ಮಡದಿಯಲ್ಲಿ ಅನುನಯದಿಂದ ನಡೆಯಬೇಕೆಂದೂ ಧ್ವನಿಯಿಂದ ಸೂಚಿಸಿದ್ದಾನೆ.

ಗಂಡನ ವಿಚಾರದಂತೆ ಹೆಂಡತಿ ನಡೆದುಕೊಳ್ಳಬೇಕು. ಗಂಡನು ಹಾಗೆ ನಡೆಯಲು (ಪ್ರೇಮದಿಂದ ತಿಳಿಸಿ) ಹಚ್ಚಬೇಕು.

"ಗಂಡ ಭಕ್ತನಾಗಿ ಹೆಂಡತಿ ಭವಿಯಾದಡೆ ಉಂಡ ಊಟ
ಇಬ್ಬರಿಗೂ ಸರಿಭಾಗ.
ಸತ್ತ ನಾಯ ತಂದಟ್ಟು ಮೇಲೆ ಇಳುಹಿ ಒಬ್ಬರೊಪ್ಪಟ್ಟಿಯ
ಹಂಚಿಕೊಂಡು ತಿಂಬಂತೆ ಕಾಣಾ ರಾಮನಾಥ."

ಪತಿ ಭಕ್ತಿಪರಾಯಣನಾಗಿ ಅವನ ಹೆಂಡತಿ ಬೇರೆ ವಿಧವಾಗಿ ಆಚರಿಸಿದರೆ ಸತ್ತ ನಾಯನ್ನು ತಂದು ಅಡಿಗೆಮಾಡಿ ಒಬ್ಬೊಬ್ಬರು ಒಂದೊಂದು ಭಾಗ ತಿಂದ ಹಾಗೆಂದು ನಿಷ್ಠುರವಾಗಿ ತಿರಸ್ಕರಿಸುತ್ತಾನೆ.

ಪರಸ್ತ್ರೀಯರನ್ನು ಗೌರವದಿಂದ ಕಾಣಬೇಕು.
"ಗಂಡನುಳ್ಳಮ್ಮನ ಗೌರಿಯೆಂದು ಕಂಡಡೆ
ಭೂಮಂಡಲಕ್ಕೆ ಅರಸಾಗಿ ಪುಟ್ಟುವನಾತನು.
ಗಂಡನುಳ್ಳಮ್ಮನ ಒಡವೆರೆದಾತ ನರಕದಲ್ಲಿ
ದಿಂಡುಗೆಡೆದಿಪ್ಪನೈ ರಾಮನಾಥ."

ವಿವಾಹಿತರಾದ ಸ್ತ್ರೀಯರು ಸಾಕ್ಷಾತ್ ಗೌರಿ (ಪಾರ್ವತಿ)ಯ ಸಮಾನವೆಂದು ಕಾಣಬೇಕು. ಹೀಗೆ ವರ್ತಿಸುವವನು ಅರಸನಾಗಿ ಸಕಲ ಸೌಭಾಗ್ಯಗಳನ್ನು ಕಾಣುವನು. (ಮಂತ್ರಿ ಮಾನ್ಯರಾಗಿ ಸುಖ ಪಡೆಯುವರು ಆಧುನಿಕ ದಿನಗಳಲ್ಲಿ.) ಸ್ತ್ರೀಯರನ್ನು ಅವಮಾನಕ್ಕೀಡುಮಾಡುವವನು ನೇರವಾಗಿ ನರಕಕ್ಕೆ ಹೋಗುವನು. ಕಷ್ಟಪರಂಪರೆಗೆ ಈಡಾಗುವನು. ದೇವರದಾಸಿಮಯ್ಯನು ವಿವಾಹಿತ ಸ್ತ್ರೀಯೆಂದರೆ ಪಾರ್ವತಿ ಸಮಾನ ಎಂದು ಹೇಳಿದ್ದಾನೆ.

ಗಂಡನುಳ್ಳವರನ್ನಷ್ಟೆ ಗೌರವದಿಂದ ಕಂಡರೆ ಆಗಲಿಲ್ಲ. ವಿಧವೆಯರನ್ನು ಅತ್ಯಂತ ಆದರದಿಂದ ಕಾಣಬೇಕು, ಅವರ ಸಂಗಡ ಗೌರವದಿಂದ ವರ್ತಿಸಬೇಕು. ಹಾಗೆ ಇರದೆ ಸೊಕ್ಕಿನಿಂದ, ಮೋಸದಿಂದ ಅವರೊಡನೆ ನಡೆದುಕೊಂಡರೆ ನರಕ ಪ್ರಾಪ್ತಿ.

> " ಶಿವಭಕ್ತರು ತಮ್ಮ ನಿಜ ಕೈಲಾಸಕ್ಕೆ ಹೋದರೆ,
> ಅವರರಸಿಯು ಪಾರ್ವತಿಯ ಸರಿಯೆಂದು ಕಾಣಬೇಕು.
> ಅಲ್ಲಿ ಅನುಸರಣೆಯು ಕೊಟ್ಟು ಬೆರಸಿ ಮಾತನಾಡುವ
> ನರಕಿಗಳನೇನೆಂಬೆ ರಾಮನಾಥ. "

ನಮ್ಮ ಸಮಾಜ ವಿಧವೆಯರನ್ನು ಕೀಳುದೃಷ್ಟಿಯಿಂದ ಕಾಣುತ್ತ ಬಂದಿದೆ. ಅವರ ಬಾಳು ಗೋಳಿನ ತವರೂರಾಗಿದೆ. ಅವರು ತಿರಸ್ಕೃತರಲ್ಲ, ಅಶುಭರಲ್ಲ. ಅವರು ಲೋಕಮಾತೆ, ಜನ್ಮದಾತೆ, ಪಾರ್ವತಿದೇವಿಯ ಸಮಾನರೆಂಬ ಅಭಿಪ್ರಾಯ ದಾಸಿಮಯ್ಯನದು. ಇನ್ನಾದರೂ ವಿಧವೆಯರನ್ನು ಗೌರವದಿಂದ ನಡೆಯಿಸಿಕೊಳ್ಳುವುದನ್ನು ಸಮಾಜ ಕಲಿಯಬೇಕಾಗಿದೆ.

ವ್ಯಭಿಚಾರಿಗಳನ್ನು ಕ್ರೂರವಾಗಿ ಶಿಕ್ಷಿಸಬೇಕು. ಅಂತ ಹರು ಯಾವ ಹೆಸರಿನಿಂದ ಕರೆಯಲೂ ಅಯೋಗ್ಯರು. ಅವರ ಸ್ವಭಾವದ ಪರಿಚಯ ಈ ವಚನದಲ್ಲಿದೆ

" ಅಡಗ ತಿಂಬರು ಕಣಕದಡಿಗೆಯಿರಲ್ಕೆ
ಸುರೆಯ ಕುಡಿವರು ಹಾಲಿರಲ್ಕೆ
ಮುಕ್ಕುವರು ಭಂಗಿಯ ಸಕ್ಕರೆಯಿರಲ್ಕೆ
ಸ್ವಸ್ತ್ರೀಯಿದ್ದಂತೆ ಪರಸ್ತ್ರೀಯರಿಗೆ ಅಳುಪುವರು
ಸತ್ತ ನಾಯ ಭಕ್ಷಿಸುವ ಹಡಕಿಗರನೇನೆಂಬೆನಯ್ಯಾ
ರಾಮನಾಥ "

ಶಿವನು ತಿನ್ನಲು ಹಿತಕರವಾದ, ರುಚಿಕರವಾದ ವಸ್ತುಗಳನ್ನು ದಯಪಾಲಿಸಿದ್ದರೂ ಅವುಗಳನ್ನು ಬಿಟ್ಟು ದೇಹಕ್ಕೆ ಅಹಿತವಾದ ಪದಾರ್ಥಗಳನ್ನು ತಿನ್ನಲು ಬಯಸುವವರು ಸತ್ತನಾಯಿ ಯನ್ನು ತಿನ್ನುವ ಹೊಲಸು ಕೆಲಸಕ್ಕೆಳಿಸಿದಂತೆ. ಶಿವಭಕ್ತ ರಾದವರು ಈ ಹೀನಕೃತಿಗೆ ಇಳಿಯಬಾರದೆಂಬುದನ್ನು ದಾಸಿ ಮಯ್ಯನು ಕಠೋರವಾಗಿ ಹೇಳಿದ್ದಾನೆ.

ಈಶನ ಭಕ್ತರು ವೇಶ್ಯೆಯ ಸ್ನೇಹ ಬೆಳೆಸುವುದು ಈಶ ಭಕ್ತಿಗೆ ಕುಂದು.

" ಈಶನ ಶರಣರು ವೇಶಿಯ ಹೋದರೆ
ಮೀಸಲೋಗರನ ಹೊರಗಿರಿಸಿದಡೆ, ಹಂದಿ
ಮೂಸಿನೋಡಿದಂತೆ ಕಾಣಾ ರಾಮನಾಥ "

ಅವನ ಬಾಳು, 'ಪೇಸಲ' ವಸ್ತುವನ್ನು ಹಿಂದಿ ಮೂಸಿ ನೋಡಿದರೆ ಅದರ ಪಾವಿತ್ರ್ಯ ಕೆಟ್ಟುಹೋಗುವಂತೆ, ಚರಿತ್ರ ಹೀನವಾಗುತ್ತದೆ. ಅಂತಹರು ದೇವರದಾಸಿಮಯ್ಯನ ದೃಷ್ಟಿಯಲ್ಲಿ ಅಪರಾಧಿಗಳು, ದ್ರೋಹಿಗಳು. ವೇಷಕ್ಕೆ ಮರುಳಾಗುವವರೇ ಬಹಳ ಜನ ಈಗ. ಅದು ಸಲ್ಲದು. ಅಂತರಂಗ ಶುಚಿಯಾಗಿರಬೇಕೆಂಬುದನ್ನು ದಾಸಿಮಯ್ಯನು ಒತ್ತಿಹೇಳಿದ್ದಾನೆ.

"ತೊಡೆಯಲ್ಲಿ ಮುದ್ರೆಯನೊತ್ತಿದಡೇನು ?
ಅದು ನಡೆಯಲ್ಲಿ ಶುಚಿಯಾಗಬಲ್ಲುದೆ ?
ಮುಡಿಲಲ್ಲಿ ಲಿಂಗವ ಕಟ್ಟಿದಡೇನು ?
ಲೋಕದ ಅಜ್ಞಾನಿತನ ಬಿಡುವುದೆ ?
ನಡೆ ನುಡಿ ಸತ್ಯ ಸದಾಚಾರಿಗಳು ಎಡೆಯಿಡೆಗೊಬ್ಬರು
ಕಾಣಾ ರಾಮನಾಥಾ."

ಬಾಹ್ಯಾಡಂಬರಿಗಳನ್ನು ದಾಸಿಮಯ್ಯನು ನಿಂದಿಸುತ್ತಾನೆ. ಸತ್ಯ ಸದಾಚಾರಿಗಳು ದೊರಕುವುದು ಕಷ್ಟ. ಅಂತಹರು ಬಹಳ ವಿರಳ. ಕೊರಳಲ್ಲಿ ಲಿಂಗ ಕಟ್ಟಿಕೊಂಡರೇನಾಯಿತು ? ಆ ಲಿಂಗದ ತಿಳಿವಳಿಕೆ ಅವರಿಗೆ ಇಲ್ಲದಿದ್ದರೆ ? ಗೂಳಿಯ ತೊಡೆಗೆ ಲಿಂಗಮುದ್ರೆಯನೊತ್ತಿ ಬಿಡುತ್ತಾರೆ. ಅದಕ್ಕೆ ಅದರ ತಿಳಿವಳಿಕೆಯಿಲ್ಲ. ಅದು ತನ್ನ ಪಶುವೃತ್ತಿಯನ್ನು ತೊರೆಯದು. ಹಾಗೆಯೇ ಒಳ್ಳೇ ಆಚರಣೆಯಿಲ್ಲದವರು ಲಿಂಗ ಕಟ್ಟಿಕೊಂಡರೆ ಬಸವನಿಗೆ ಲಿಂಗಮುದ್ರೆಯನ್ನು ಒತ್ತಿದಂತೆ ವ್ಯರ್ಥ.

## ನಿಷ್ಠಾಪರತೆ

ಭಕ್ತನು ನಿಷ್ಠಾಪರನಾಗಿರಬೇಕು. ಅಚಲನಾಗಿರಬೇಕು. ತೀರ್ಥಯಾತ್ರೆ, ಪಂಚಾಂಗ ಮೊದಲಾದವುಗಳಲ್ಲಿ ನಂಬಿಕೆ ಯಿರಕೂಡದು. ನಿಷ್ಠೆಯಿದ್ದ ಭಕ್ತ ಕಟ್ಟಡವಿಯಲ್ಲಿದ್ದರೂ ಪಟ್ಟಣದ ಸೌಕರ್ಯದಂತೆ ಹಿತಕರವಾಗಿರುತ್ತದೆ. ನಿಷ್ಠಾರಹಿತನಿಗೆ ಪಟ್ಟಣವೂ ಕಾಡಿನಂತೆ. ಕೈಕೊಂಡ ಕೆಲಸದಲ್ಲಿ ಸ್ವಲ್ಪ ತೊಂದರೆ ಉಂಟಾದರೆ ಅದನ್ನು ಬಿಟ್ಟುಬಿಡುತ್ತಾನೆ.

"ಇರುಹೆಯು ತೆರನರಿದು ಸೆರೆ ಛಲವಿಲ್ಲದೆ
ಮಾಡಿದವನ ಭಕ್ತಿ
ಇರುಹೆಯಿಂದ ಕರಕಷ್ಟ ಕಾಣಾ ರಾಮನಾಥಾ."

ಇರುವೆ ಅತಿ ಚಿಕ್ಕ ಪ್ರಾಣಿ. ಅದು ಸದಾ ಪ್ರಯತ್ನದಲ್ಲಿ ತೊಡಗಿ ಯಶಸ್ವಿಯಾಗುತ್ತದೆ. ಮಾನವನೂ ಇರುವೆಯಂತೆ ಸತತ ಉದ್ಯೋಗಿಯಾಗಿರಬೇಕು, ಪ್ರಯತ್ನವಾದಿಯಾಗಿರಬೇಕು, ಜಯ ಪಡೆಯಬೇಕು. ಕೈಕೊಂಡ ಕಾರ್ಯದಿಂದ ಹಿಂಜರಿಯ ಬಾರದು.

ಭಕ್ತನ ಪ್ರಯತ್ನದಲ್ಲಿ ಶಿವನು ಹಲವಾರು ಎಡರು ತೊಡರುಗಳನ್ನು ಒಡ್ಡುತ್ತಾನೆ, ಪರೀಕ್ಷೆಗೆ ಈಡುಮಾಡುತ್ತಾನೆ. ಅದರಲ್ಲಿ ಸೋಲಬಾರದು.

"ಹರ ತನ್ನ ಭಕ್ತರ ತಿರಿವಂತೆ ಮಾಡುವ
ಒರೆದು ನೋಡುವ ಸುವರ್ಣದ ಬೆನ್ನದಂತೆ
ಅರೆದು ನೋಡುವ ಚಂದನದಂತೆ

ಅರಿದು ನೋಡುವ ಕಬ್ಬಿನ ಕೋಲಿನಂತೆ
ಬಿದರಡೆ ಬಿಜ್ಜಡೆ ಇದ್ದಡೆ ಕರವಿಡಿದೆತ್ತಿಕೊಂಬ
ನಮ್ಮ ರಾಮನಾಥ. ”

ಶಿವನು ಭಕ್ತನನ್ನು ಉಗ್ರಪರೀಕ್ಷೆಗೆ ಒಳಗುಮಾಡುತ್ತಾನೆ.
ಭಕ್ತನಾದವನು ಅದನ್ನೆಲ್ಲ ಸಹಿಸಬೇಕು, ಪ್ರಯತ್ನದಿಂದ
ಅದನ್ನು ಗೆದೆಯಬೇಕು. ಅಂತಹನು ಶಿವನ ಪ್ರೀತಿಗೆ ಪಾತ್ರ
ನಾಗುತ್ತಾನೆ, ಮಗುವನ್ನು ತಾಯಿ ವಾತ್ಸಲ್ಯದಿಂದ ಎತ್ತಿ
ಮುದ್ದಾಡುವಂತೆ ಭಕ್ತನನ್ನು ಎತ್ತಿ ಮುದ್ದಾಡುತ್ತಾನೆ.
ಕರ್ತವ್ಯದಲ್ಲಿ ಮಗ್ನನಾಗಿ ಭಕ್ತನು ಉಳಿದುದೆಲ್ಲವನ್ನೂ ಪರ
ಮಾತ್ಮನ ಮೇಲೆ ಬಿಟ್ಟುಬಿಡಬೇಕು. ಇಂದು ನಾಳೆಯ ಚಿಂತೆ
ಯನ್ನು ಮಾಡದೆ ಅದನ್ನು ಅವನ ತಲೆಗೆಯೇ ಹೊರಿಸಬೇಕು.
ಆಗ ಶಿವನು ಭಕ್ತನ ಕಾಳಜಿ ವಹಿಸುತ್ತಾನೆ. ಸಂಗ್ರಹ ಮಾಡು
ವುದು ತ್ಯಾಜ್ಯವಾದುದು. ನಾಳೆ, ನಾಡದು ಹೇಗೆಯೆಂಬ
ಚಿಂತೆಯಿಂದ ಸಂಗ್ರಹಿಸಿಟ್ಟದರ ಪರಿಣಾಮ ಅನೇಕ ರಾಜ
ಕೀಯ ಪಕ್ಷಗಳಿಗೆ ಅವಕಾಶ ಕೊಟ್ಟಿದೆ. ಈ ತಾರತಮ್ಯ ವಿಪ
ರೀತ ಪರಿಣಾಮಕ್ಕೆಡೆಯಾದುದನ್ನು ನಾವೆಲ್ಲ ಇಂದು ಕಾಣು
ತ್ತೇವೆ.

ದೇವರ ದರ್ಶನ ಪಡೆಯಬೇಕೆಂದು ಕಾಶಿ, ರಾಮೇಶ್ವರ
ಮುಂತಾದ ಪುಣ್ಯಸ್ಥಳಗಳಿಗೆ ಜನರು ಹೋಗುವುದುಂಟು.
ಅಲ್ಲಿಯೇ ದೇವರಿದ್ದಾನೆಂಬುದು ಅವರ ದೃಢನಂಬಿಕೆ. ಪರ
ಮಾತ್ಮನೆಲ್ಲೆಲ್ಲಿಯೂ ಇರುವನು. ಸಾಲ ಮಾಡಿಕೊಂಡು ದೇವ

ರನ್ನು ಕಾಣಲು ಬೇರೆ ಸ್ಥಳಗಳಿಗೆ ಹೋಗಬೇಕಿಲ್ಲ. ಶ್ರದ್ಧೆಗೆ ಶಿವನೊಲಿಯುವನು. ಜನರ ಈ ಮೂಢ ನಂಬಿಕೆಗಳಿಗೆ ದಾಸಿಮಯ್ಯನು ಮರುಗಿದ್ದಾನೆ. ತೀರ್ಥಯಾತ್ರೆ ನಿಷೇಧವನ್ನು ಒತ್ತಿಹೇಳಿದ್ದಾನೆ.

> “ಜಂಬೂದ್ವೀಪವನೆಲ್ಲ ತಿರುಗಿದಡೇನು?
> ಜಂಬುಕ ಶಂಭುಧ್ಯಾನದಲ್ಲಿ ಸೈವೆರಗಪ್ಪುದೆ?
> ಕುಂಭಿನಿಯ ತಿರುಗಿ ಕೋಟಿತೀರ್ಥವ ಮಿಂದಡೇನು?
> ಶಂಭು ನಿಮ್ಮಲ್ಲಿ ಸ್ವಯವಾಗದವನು ಕುಂಭಿನಿಯ
> ತಿರುಗಿದ ಡೊಂಬನಂತೆ ಕಾಣಾ ರಾಮನಾಥ.”

ನರಿ ಮುಂತಾದ ಪ್ರಾಣಿಗಳು ಪೃಥ್ವಿ ಪ್ರದಕ್ಷಿಣೆ ಮಾಡುವುದುಂಟು. ಅದಕ್ಕೆ ಶಿವನನ್ನು ಒಲಿಸಿಕೊಳ್ಳಲು ಸಾಧ್ಯವಿಲ್ಲ. ಶಿವನ ಸಾಕ್ಷಾತ್ಕಾರಕ್ಕೆ ಕಾತರನಾದವನು ಸಂತತ ಅವನ ಧ್ಯಾನದಲ್ಲಿರಬೇಕು. ಹೀಗೆ ಇರದವನು ಹೊಟ್ಟೆಪಾಡಿಗಾಗಿ ಶಾರೀರಕ ಚಾಪಲ್ಯಗಳನ್ನು ಪ್ರದರ್ಶಿಸುತ್ತ ದೇಶ ದೇಶ ತಿರುಗುವ ಡೊಂಬನಿಗೆ ಸಮಾನನಾಗುತ್ತಾನೆ ಎಂದು ದಾಸಿಮಯ್ಯ ತೀರ್ಥಯಾತ್ರೆ ಮಾಡುವವರನ್ನು ನಿಂದಿಸಿದ್ದಾನೆ. ಈಗಂತೂ ದೇವರ ದರ್ಶನ ದುಬಾರಿಯಾಗತೊಡಗಿದೆ. ಹೇಗೋ ಅವನಿರುವ ಸ್ಥಳಗಳಿಗೆ ಹೋಗಿ ಅವನನ್ನು ಕಂಡುಬರುವುದು ಸುಲಭವೆ? ಅಲ್ಲಿರುವ ಸರತಿಯ ಸಾಲು ಹೆದರಿಸುತ್ತದೆ. ಕಳ್ಳಕಾಕರ ಭಯಕ್ಕೂ ಕಡಿಮೆಯಿಲ್ಲ, ಇರಲು ಅನಾನುಕೂಲ. ಅಂಗಹೀನರು ಮುತ್ತಿ ಬೇಡುತ್ತಿರುತ್ತಾರೆ. ಅವರಿಗೂ ಹಣದ ಅಗತ್ಯವಿದ್ದರೂ ಒಂದು ಪೈಸೆ ದಾನಮಾಡುವದಿಲ್ಲ ಯಾತ್ರಿಕ.

ಕಲ್ಲದೇವರೆದುರಿಗೆ ಅಡ್ಡ ಉದ್ದ ಬಿದ್ದು ಹಣ ಸುರಿವುತ್ತಾನೆ. ಅದರಿಂದ ದೊರೆಯುವ ಲಾಭವಾದರೂ ಏನು? ಸಾವ ಕಾಲಕ್ಕೆ ಅನೇಕ ರೋಗಗಳಿಗೆ ತುತ್ತಾಗಿ ಬಂಧುಬಳಗಕ್ಕೆ ಬೇಡಾಗಿಯೇ ಇಹಯಾತ್ರೆ ಮುಗಿಸಬೇಕು. ದಾಸಿಮಯ್ಯನು ಬಹುಕಾಲದ ಹಿಂದೆಯೇ ಈ ಎಚ್ಚರಿಕೆಯಿತ್ತರೂ ನಾವಿನ್ನೂ ನಿದ್ದೆಯಲ್ಲಿಯೇ ಇದ್ದೇವೆ.

ನಮ್ಮಲ್ಲಿ ಕೆಲಸ ಮಾಡುವ ಪೂರ್ವದಲ್ಲಿ ಮುಹೂರ್ತ ನೋಡುವ ರೂಢಿ ಬೆಳೆದಿದೆ. ಮಗು ಹುಟ್ಟಿದರೂ ಪಂಚಾಂಗ ಕೇಳಿಸುತ್ತೇವೆ ಈ ಅಂಧಶ್ರದ್ಧೆಗಳ ಹಾವಳಿ ವಿಶೇಷವಿದೆ ಇನ್ನೂ ನಮ್ಮ ಜನರಲ್ಲಿ. ಜ್ಯೋತಿಷ್ಯವನ್ನು ನಂಬಿ ಗ್ರಹಾದಿ ಗಳಲ್ಲಿ ವಿಶ್ವಾಸವಿರಿಸುವುದು ಭಕ್ತನಾದವನಿಗೆ ಸರಿಯಾದುದಲ್ಲ, ವಿಹಿತವಾದುದಲ್ಲ.

> "ಅಚ್ಚ ಶಿವೈಕ್ಯಂಗೆ ಪೊತ್ತಾರೆ ಅಮಾವಾಸ್ಯೆ
> ಮಟ್ಟಮಧ್ಯಾಹ್ನ ಸಂಕ್ರಾಂತಿ,
> ಮತ್ತೆ ಅಸ್ತಮಾನ, ಪೌರ್ಣಿಮೆ ಎಂಬುವಿಲ್ಲ
> ಭಕ್ತನ ಮನೆಯಂಗಣವೆ ವಾರಣಾಸಿ ಕಾಣಾ
> ರಾಮನಾಥ."

ನಿಜವಾದ ಭಕ್ತನಿಗೆ ನಿತ್ಯವೂ ಶುಭದಿನವು. ಅದೇ ಅಮಾವಾಸ್ಯೆ. ಅದೇ ಹುಣ್ಣಿವೆ. ಅಂದೇ ಶುಭವಾದ ಸಂಕ್ರಾಂತಿ ಕಾಲ. ಆ ಭಕ್ತನ ಮನೆಯ ಅಂಗಣಕ್ಕೆ ಪ್ರಸಿದ್ಧ ತೀರ್ಥ ಕ್ಷೇತ್ರಗಳ ಯೋಗ್ಯತೆಯಿದೆ. ಅದು ಕಾಶಿಕ್ಷೇತ್ರಕ್ಕೆ ಸಮಾನ.

ಕಾರಣ ಪಂಚಾಂಗ ನೋಡಬಾರದು. ತೀರ್ಥಯಾತ್ರೆಗಳನ್ನು ಪುಣ್ಯ ಒರುವದೆಂಬ ಉದ್ದೇಶದಿಂದ ಕೈಕೊಳ್ಳಬಾರದೆಂದು ದಾಸಿಮಯ್ಯನು ಎಚ್ಚರಿಕೆಯಿತ್ತಿದ್ದಾನೆ.

## ಸಾಮಾನ್ಯ ನೀತಿ

"ಮಡದಿಯ ಪ್ರಾಣಕ್ಕೆ ಮೊಲೆ ಮುಡಿಯಿದ್ದಿತ್ತೆ ?
ಒಡೆಯರ ಪ್ರಾಣಕ್ಕೆ ಇದ್ದಿತ್ತೆ ಯಜ್ಞೋಪವೀತ ?
ಕಡೆಯಲ್ಲಿದ್ದ ಅಂತ್ಯಜನು ಹಿಡಿದಿದ್ದನೆ ಪ್ರಾಣದಲ್ಲಿ
ಹಿಡಿಗೋಲ ?
ನೀನಿಕ್ಕಿದ ತೊಡಕನೀ ಲೋಕದ
ಜಡರೆತ್ತ ಬಲ್ಲರೈ ರಾಮನಾಥ."

ದೇವನನ್ನು ಪೂಜಿಸುವವರಲ್ಲಿ ಜಾತಿ ಭೇದವನ್ನು ಎಣಿಸ ಕೂಡದು. ಹಾಗೆಯೇ ಸ್ತ್ರೀ ಪುರುಷರೆಂಬ ಭೇದವನ್ನೂ ಮಾಡ ಕೂಡದು. ಮೊಲೆ ಮುಡಿಗಳಿದ್ದುದರಿಂದ ಅವರಿಗೆ ಸ್ತ್ರೀಯ ರೆಂದೆನ್ನುವುದುಂಟು. ಇವು ಕೇವಲ ದೇಹಕ್ಕೆ ಸಂಬಂಧಿ ಸಿದುವು. ಪ್ರಾಣಕ್ಕೆ ಇವೆಲ್ಲ ಇರುವುದಿಲ್ಲ. ಕಾರಣ ಸ್ತ್ರೀ ಪುರುಷರು ಸಮಾನರು. ಹಾಗೆಯೇ ಸ್ಪೃಶ್ಯರು ಅಸ್ಪೃಶ್ಯರೆಂಬ ಭೇದವಿರಕೂಡದು. ಬ್ರಾಹ್ಮಣನಿಗಿರುವ ಜನಿವಾರವೂ, ಅಂತ್ಯ ಜನು ತನ್ನ ಕೆಲಸಕ್ಕಾಗಿ ಉಪಯೋಗಿಸುವ ರೆಂಪೆಗಳೂ ಅವ ರವರ ಪ್ರಾಣಗಳಲ್ಲಿರುವದಿಲ್ಲ. ಅವು ಕೇವಲ ಬಾಹ್ಯಾಂಗಗಳಲ್ಲಿ ಮಾತ್ರ ಇವೆ. ಕಾರಣ ಇವರಲ್ಲಿ ಉಚ್ಚ ನೀಚ ಎಂಬ ಭಾವ ವನ್ನು ಎಣಿಸುವುದು ಸರಿಯಲ್ಲ. ಪ್ರಾಣದಲ್ಲಿ ಶುದ್ಧಿ ಪಾವಿತ್ರ್ಯ

ಏರುವ ವರೆಗೆ ಎಲ್ಲರೂ ಶ್ರೇಷ್ಠರು, ಮೇಲಾದವರು ಎಂಬುದು ದೇವರದಾಸಿಮಯ್ಯನ ಸ್ಪಷ್ಟ ಅಭಿಪ್ರಾಯ. ಈ ಘನ ತತ್ತ್ವ ತಿಳಿಯದೆ ಜನರು ನಾ ಮೇಲು ನಾ ಮೇಲು ಎಂದು ಹೋರಾಡು ತ್ತಿರುವುದಕ್ಕೆ ಬೆರಗಾಗಿದ್ದಾರೆ ವಚನಕಾರರು.

> " ತನು ತನ್ನ ಹೊರೆಯಲಿದ್ದರೇನು ಎಷ್ಟು ದಿನ ?
> ಮನ ತನ್ನ ಹರಿದತ್ತ ಹರಿದ ಬಳಿಕ!
> ಕೆನೆಯಿಲ್ಲದ ಮೊಸರ ಕಡೆದರೆ ಅಲ್ಲಿ ಒಂದು
> ಹನಿ ತುಪ್ಪವಿಲ್ಲ ಕಾಣಾ ರಾಮನಾಥ. "

ಮಾನವನು ವಿಷಯದ ಕಡೆ ಹರಿವ ಮನಸ್ಸನ್ನು ನಿಯಂತ್ರಣ ದಲ್ಲಿಟ್ಟುಕೊಳ್ಳಬೇಕು. ತಾನು ಆ ಮರ್ಕಟ ಮನಸ್ಸಿನ ಅಧೀನ ವಾಗಿರಬಾರದು; ಅದರ ವಶದಲ್ಲಿ ತಾನಿದ್ದರೆ ಏನೂ ಫಲವಿಲ್ಲ. ಕೆನೆಯಿಲ್ಲದ ಮೊಸರನ್ನು ಎಷ್ಟು ಕಡೆದರೂ ಬೆಣ್ಣೆ ಬರುವದಿಲ್ಲ. ಮತ್ತೆ ತುಪ್ಪ ಹೊರಡುವದಿಲ್ಲ. ಹಾಗೆ ಮೊಸರನ್ನು ಕಡೆಯು ವದು ನಿಷ್ಪ್ರಯೋಜಕ. ಅಂತೆಯೇ ತನ್ನ ನಿಯಂತ್ರಣದಲ್ಲಿಲ್ಲದ ಮನಸ್ಸನ್ನು ಪಡೆದ ಮಾನವನ ಬಾಳು ಎಷ್ಟು ಕಾಲವಿದ್ದರೂ ಲಾಭವಿಲ್ಲ.

> " ಒಡಲುಗೊಂಡವ ಹಸಿವ
> ಒಡಲುಗೊಂಡವ ಹುಸಿವ
> ಒಡಲುಗೊಂಡವನೆಂದು ನೀನೆನ್ನ
> ಜಡಿದೊಮ್ಮೆ ನುಡಿಯದಿರಾ,
> ನೀನೆನ್ನಂತೆ ಒಮ್ಮೆ ಒಡಲುಗೊಂಡು ನೋಡಾ
> ರಾಮನಾಥಾ "

ಮಾನವ ಹಿತವನ್ನು ಮುಖ್ಯ ಗುರಿಯಾಗಿಟ್ಟುಕೊಂಡವನು ದಾಸಿಮಯ್ಯ. ಮಾನವ ಕುಲದ ಬಗೆಗೆ ಅವನಿಗೆ ಅನುಕಂಪೆ, ಕರುಣೆ ವಿಶೇಷ. ಮಾನವರ ಪರವಾಗಿ ದೇವನಿಗೆ ಆಹ್ವಾನ-ವಿತ್ತಿದ್ದಾನೆ. ತಪ್ಪುವುದು ಮಾನವನ ಸ್ವಭಾವ, ಆ ತಪ್ಪನ್ನು ಕ್ಷಮಿಸಿ, ತಿದ್ದಿ, ಉದ್ಧಾರಮಾಡುವುದು ದೇವದೇವನ ಕಾರ್ಯ. ಅದನ್ನು ಪರಿಪರಿಯಿಂದ ಬೇಡಿದ್ದಾನೆ ಶಿವನಲ್ಲಿ, ವಚನಕಾರ ದಾಸಿಮಯ್ಯನು. ಇದಾಗದಿದ್ದರೆ, 'ಒಮ್ಮೆ ಮನುಷ್ಯ ಜನ್ಮತಾಳಿ ನೋಡು ನೀನೂ ಎಷ್ಟು ತಪ್ಪು ಮಾಡುವಿ ಎಂಬುದು ತಿಳಿದು ಬರುವುದು' ಎಂದು ಹೇಳಿದ್ದಾನೆ. ಕಾರಣ ದಯಾಭರಿತನಾಗಿ ನಮ್ಮನ್ನೆಲ್ಲ ಕ್ಷಮಿಸು.

"ಅನುಭಾವವಿಲ್ಲದೆ ಈ ತನು ಎಳತಟವಾದುದಯ್ಯ !
ಅನುಭಾವವೇ ತನುವಿಂಗಾಧಾರ
ಅನುಭಾವಿಗಳ ಅನುಭಾವ ಮನವಾರೆ
ಜೇಧಿಸಿದವರಿಗೆ ಜನನವಿಲ್ಲ ಕಾಣಾ ರಾಮನಾಥ."

ಅನುಭಾವ ಅಂತರಂಗದ ರತ್ನ. ಜ್ಞಾನವುಳ್ಳವನಾಗಬೇಕು ಮನುಷ್ಯ. ಅದು ಉಳ್ಳವನು ಬಲಾಢ್ಯನು. ಅದು ಶರೀರಕ್ಕೆ ಆಧಾರವಾಗಿರುತ್ತದೆ. ಅನುಭಾವವುಳ್ಳವರೊಡನೆ ಮಾತುಕತೆ ಬೆಳಸಬೇಕು. ಅಂತು ಇದ್ದವರಿಗೆ ಜನನದ ಬಾಧೆಯಿಲ್ಲ. ಅವನು ಮೋಕ್ಷ ಜೀವಿಯಾಗುವನು.

"ಸಣ್ಣ ನನೆಯೊಳಗಣ ಪರಿಮಳವ,
ಹೊರಸೂಸಿ ಇದಿರಿಂಗರುಹಿಸ ಬಲ್ಲುದೆ ವಾಯು ?
ಕೊಡಗೂಸಿನೊಳಗಣ ಮೊಲೆ ಮುಡಿಯು-

ಹಡೆದ ತಾಯಿ ತಂದೆಗಳೆಂದರೆ,
ಕಾಣಿಸಿಕೊಡಬಲ್ಲರೆ ಕಾಂಬವರ ಕಣ್ಣಿಂಗೆ ?
ಪಕ್ವಕ್ಕಲ್ಲದೆ ಪರಿಣಾಮ ಕಾಣಿಸದು ರಾಮನಾಥ. '

ಶರಣರಾದವರು ಕ್ರಿಯಾಜ್ಞಾನಗಳ ಭೇದವರಿತು ಆಚರಿಸುತ್ತ ಹೋಗಬೇಕು. ಅರಿದಾಗ ಅವು ಪಕ್ವ ಸ್ಥಿತಿಗೆ ಬರುತ್ತವೆ. ಆಗ ಶರಣನಿಗೆ ಲಿಂಗಸುಖದ ಅನುಭವವಾಗುವುದು. ಅಲ್ಲಿಯ ತನಕ ಅವನು ಜ್ಞಾನ, ಕ್ರಿಯೆಗಳನ್ನು ಮಾಡುತ್ತ ಹೋಗಬೇಕು. ದೇವರದಾಸಿಮಯ್ಯನು ಇಲ್ಲಿ ಕೆಲವು ಉದಾಹರಣೆಗಳನ್ನು ಕೊಟ್ಟಿದ್ದಾನೆ. ಒಂದು ಮೊಗ್ಗಿನಲ್ಲಿಯ ಪರಿಮಳ ಪ್ರಕಟವಾಗಬೇಕಾದರೆ ಅದು ಪಕ್ವದ ಸ್ಥಿತಿಗೆ ಬರಬೇಕು. ಕನ್ನೆಯಲ್ಲಿ ಸ್ತನ, ಮುಡಿಗಳು ಗೋಚರವಾಗಬೇಕಾದರೆ ಆಕೆಯು ಪೂರ್ಣಾವಸ್ಥೆಗೆ ಬರಬೇಕು. ಹಾಗೆಯೇ ಭಕ್ತನಲ್ಲಿ ಲಿಂಗಗುಣಗಳಿದ್ದರೂ ಆಚರಣೆಯಿಂದ ಪಕ್ವ ಸ್ಥಿತಿಗೆ ತಂದಾಗ ಅವು ಗೋಚರವಾಗುವವು.

"ಮೊಲೆ ಮುಡಿ ಬಂದರೆ ಹೆಣ್ಣೆಂಬರು.
ಗಡ್ಡ ಮೀಸೆ ಬಂದರೆ ಗಂಡೆಂಬರು.
ನಡುವೆ ಸುಳಿವಾತ್ಮನು ಗಂಡೂ ಅಲ್ಲ,
ಹೆಣ್ಣೂ ಅಲ್ಲ ಕಾಣಾ ರಾಮನಾಥ. "

ಶರಣನು ಹುಟ್ಟು, ಸಾವುಗಳ ಗೊಂದಲದಿಂದ ದೂರವಾಗಿರುತ್ತಾನೆ. ಆವನು ಗೈವ ಕ್ರಿಯಾದಿಗಳು ಅವನನ್ನು ಮೋಕ್ಷದ ಕಡೆಗೆ ಒಯ್ಯುತ್ತವೆ. ಆ ಕ್ರಿಯೆಗಳಲ್ಲಿ ಫಲವಿಲ್ಲ. ಅವನು ಗಂಡೂ

ಅಲ್ಲ; ಹೆಣ್ಣೂ ಅಲ್ಲ; ಮಧ್ಯದವನು. ಅಂತಹವನಿಂದ, ಅವನ ಕ್ರಿಯೆಯಿಂದ ಯಾವ ಉತ್ಪತ್ತಿಯೂ ಆಗುವದಿಲ್ಲ. ಉತ್ಪತ್ತಿ ಮಾಡಬೇಕೆಂಬ ಆಶೆಯು ಅವನಿಗಿರುವದಿಲ್ಲ. ಅವನು ನಿಷ್ಕಾಮಿ.

## ದಾಸಿಮಯ್ಯನ ಬೆಡಗು

ವಚನಕಾರರು ಕೆಲವು ವಿಶಿಷ್ಟ ಅರ್ಥದ ವಚನಗಳನ್ನು ಬರೆದಿದ್ದಾರೆ. ಮೇಲು ನೋಟಕ್ಕೆ ಅವು ಒಂದು ರೀತಿಯಾಗಿದ್ದರೆ ಅವುಗಳ ಇಂಗಿತಾರ್ಥ ಮಗುದೊಂದು ರೀತಿಯದಾಗಿರುತ್ತದೆ. ಅಂತಹ ಹಲವು ವಚನಗಳನ್ನು ದೇವರದಾಸಿಮಯ್ಯನು ಬರೆದಿದ್ದಾನೆ. ಅಂಥ ವಚನಗಳ ಸಂಖ್ಯೆ ವಿಶೇಷವಿಲ್ಲ.

> " ಉಳುವನ-ಹೆಳವನ-ಕೊಲುವ ಬೇಡನ
> ಹೆಳಲನಿಕ್ಕಿ ಕರೆದುಂಬ ಭಕ್ತನ, ಒಳಹನೇನೆಂಬೆ
> ರಾಮನಾಥ ? "

ಭಕ್ತನ ಅಂತರಂಗದ ಪರಿಯನ್ನು ವರ್ಣಿಸಲಸದಳ. ಉಳುವನ ಶರೀರವೆಂಬ ಹೊಲವನ್ನು ಹಸನುಮಾಡುವ ಗುರುವಿನ, ಹೆಳವನ (ಕಾಲಿಲ್ಲದವನ) ಸ್ಥಿರವಾಗಿರುವ ಲಿಂಗದೇವನ, ಕೊಲುವಬೇಡನ ಮತ್ತೆ ಮತ್ತೆ ಹುಟ್ಟಬರುವ ಪ್ರವೃತ್ತಿ-ಮಾರ್ಗದ ಜೀವನ ಸಂಸಾರ ವಿಷಯಗಳನ್ನು ಕೆಡಿಸುವ ಜಂಗಮನ ಈ ಮೂವರನ್ನು ( ಗುರು-ಲಿಂಗ-ಜಂಗಮ ) ತೊಡಕುಹಾಕಿ ಕರೆದು ಪ್ರಸಾದ ಸೇವಿಸುವ ಭಕ್ತನ ರೀತಿ ಮಿಗಿಲಾದುದೆಂದು ಅಭಿಪ್ರಾಯ.

“ ಆದಿ ಆರರ ಭೇದವರಿದು
ತನು ಗುಣವು ಮೂವತ್ತಾರುವ ಮೀರಿ,
ತೋರದುದ ತೋರಿಪುತ್ತ್ರಿ, ಆರೂಢವಾದರೆ
ಮೇಲೆ ನಿನ್ನಿಚ್ಛೆ ಕಾಣಾ ರಾಮನಾಥ. ”

ಷಟ್‌ಸ್ಥಲಗಳ ವಿಚಾರವನ್ನು ಮೊದಲು ತಿಳಿದು, ಆದರ ಮೂವತ್ತಾರು ತತ್ತ್ವಗಳುಳ್ಳ ಈ ಶರೀರವನ್ನು ಮೀರಿ ಮೀರಲು ಸಮರ್ಥನಾಗುತ್ತಾನೆ ಭಕ್ತ. ಅಂದರೆ ಆದಕ್ಕೆ ಅಂಕಿತನಾಗದೆ ನಡೆಯುವನು. ಇದರಿಂದ ಅವನಿಗೆ ಮೊದಲು ಯಾವ ವಸ್ತುವು ಕಾಣಿಸುತ್ತಿದ್ದಿಲ್ಲವೋ, ಅಂಥ ಪರವಸ್ತುವು ಕಾಣಹತ್ತುತ್ತದೆ. ಇದೇ ಆರೂಢ ಸ್ಥಿತಿಯು. ಆದರೆ ಈ ಸ್ಥಿತಿ ಒದಗಿಬಂದರೂ ಮೋಕ್ಷವಾಗುವದೆಂದು ಹೇಳಬರುವಂತಿಲ್ಲ. ಏಕೆಂದರೆ ಆರೂಢ ಸ್ಥಿತಿ ಉಂಟಾದ ಮೇಲೆ ಪರಮಾತ್ಮನ ಕಾರುಣ್ಯವಾದರೂ ಬೇಕು. ಈ ಸಂಗತಿಗಳೆಲ್ಲ ಒದಗಿದರೆ ಮಾತ್ರ ಮೋಕ್ಷ ಲಭಿಸುತ್ತದೆ.

“ ನಿಡಿದೊಂದು ಕೋಲನು ಕಡಿದು ಎರಡು ಮಾಡಿ,
ಅಡಿಯು ಹೆಣ್ಣುಮಾಡಿ ಬಡತನವ ಗಂಡು ಮಾಡಿ,
ನಡುವೆ ಮೊಸದಡೆ ಹುಟ್ಟಿದ ಕಿಚ್ಚು
ಹೆಣ್ಣೊ ಗಂಡೊ ರಾಮನಾಥ? ”

ಉದ್ದವಾದ ಕೋಲನ್ನು ಕಡಿದು ಎರಡು ತುಂಡು ಮಾಡಿ ಒಂದನ್ನು ಕೆಳಗೆ ಮಾಡಿ, ಇನ್ನೊಂದನ್ನು ಮೇಲೆ ಮಾಡಿ ಒಂದನ್ನೊಂದು ತಿಕ್ಕಿದರೆ ಕಿಚ್ಚು ಹುಟ್ಟುತ್ತದೆ. ಅದು ಆಗ

ಎರಡೂ ತುಂಡುಗಳನ್ನು ದಹಿಸಿಬಿಡುತ್ತದೆ. ಆಗ ಹೆಣ್ಣು ಗಂಡು ಎಂಬ ಭೇದ ಉಳಿಯಲಾರದು. ಲಿಂಗಾಂಗ ಸಾಮರಸ್ಯವೆಂಬುದು ಈ ರೀತಿ ಯಾಗಿರುತ್ತದೆ.

"ಆಡಬಾರದ ಬಯಲು, ನೋಡಬಾರದ ಬಯಲು,
ನುಡಿಯಬಾರದ ಬಯಲು, ಹಿಡಿಯಬಾರದ ಬಯಲು,
ಈ ಒಡಲಿಲ್ಲದ ಬಯಲೊಳಗಡಗಿಪ್ಪ ಭೇದವ
ಈ ಲೋಕದ ಜಡರೆತ್ತ ಬಲ್ಲರೈ ರಾಮನಾಥ."

ಐಕ್ಯದ ಘನತೆಯನ್ನು ತಿಳಿಸಿದ್ದಾನೆ ಇಲ್ಲಿ ದಾಸಿಮಯ್ಯ. ಇದರ ಮರ್ಮ ಗಹನವಾಗಿದ್ದು ಸಾಮಾನ್ಯರಿಗೆ ತಿಳಿಯಲಸಾಧ್ಯವೆಂದು ವಚನದ ಅಭಿಪ್ರಾಯ.

"ಉಂಕಿಯ ನಿಗುಚಿ, ಸರಿಗೆಯ ಸಮಗೊಳಿಸಿ,
ಸಮಗಾಲನಿಕ್ಕಿ ಅಣಿಯೊಳು ಏಳವೆಟ್ಟಿದೆ
ಹಿಡಿದ ಲಾಳಿಯ ಮುಳ್ಳು ಕಂಡಿಕೆಯ ನುಂಗಿತ್ತು."

ಈ ಸೀರೆಯ ನೇಯ್ದವ ನಾನೋ ನೀನೋ ರಾಮನಾಥ! ದೇವರದಾಸಿಮಯ್ಯನ ಕಾಯಕ ನೇಯ್ಗೆ. ಈ ಕಾಯಕದಲ್ಲಿ ಅಗತ್ಯವಿದ್ದ ವಸ್ತುಗಳನ್ನು ಬಳಸಿ ಈ ಬೆಡಗಿನ ವಚನ ಹೆಣೆದಿದ್ದಾನೆ. ನೇಯ್ಗೆ ಕಾಯಕವನ್ನು ವಿವರಿಸುತ್ತ ಅದು ಹೇಗೆ ತನ್ನ ಅಂತರಂಗದ ಶಕ್ತಿಯನ್ನು ಹೆಚ್ಚಿಸಿದೆ ಎಂಬುದನ್ನು ಹೇಳಿದ್ದಾನೆ. "ನೇಯ್ಗೆ ಕಾಯಕ ಅವನಿಗೆ ದಿವ್ಯ ಲೀಲೆ! ನೇಯುವುದರಲ್ಲಿ ಅವನಿಗೆ ಆಯಾಸವಿರಲಿಲ್ಲ. ಅದಕ್ಕೆ ಹೆಚ್ಚು ಕಾಲ ಬೇಕಾಗುತ್ತಿದ್ದಿಲ್ಲ. ಹೀಗೆ ಬಾಹ್ಯದ ಬಟ್ಟೆಯನ್ನು ಬೇಸರ

ವಿಲ್ಲದೆ ನೇಯುವಂತೆ ತನ್ನ ಅಂತರಿಕೇಂದ್ರಿಯ ನೂಲುಗಳ ನ್ನೆಲ್ಲ ಒಟ್ಟುಗೂಡಿಸಿ ಆ ಪರಬ್ರಹ್ಮನ ಬಟ್ಟೆಯಾಗಿಸಿದ್ದನು. ಆತನೆ ಲಿಂಗದುಡಿಗೆಯಾಗಿದ್ದನು. ಈ ಬಟ್ಟೆಯನ್ನು ಈತನು ನೇಯ್ದಿದ್ದರೆ, ಆ ಬಟ್ಟೆಯನ್ನು ಆತನು ನೇಯ್ದಿದ್ದಾನೆ. ಆ ನೇಯ್ಗೆಗೆ ಈತನು ಸಹಾಯಸಂಪತ್ತಿಯನ್ನು ಕಲ್ಪಿಸಿಕೊಟ್ಟಿದ್ದಾನೆ. ಇದರಿಂದ ಆ ಬಟ್ಟೆಯನ್ನು ಯಾರು ನೇಯ್ದರೆಂಬುದು ನಿಷ್ಕರ್ಷೆಯಾಗಿಲ್ಲ. ಇಬ್ಬರೊಂದಾದಾಗ ಯಾರೆಂದು ಹೇಳ ಬೇಕು ? ನಾನೋ ನೀನೋ ಎಂದು ಕೇಳುವವರಾರು ? ಅದಕ್ಕೆ ಉತ್ತರ ಹೇಳುವವರಾರು ? ಆ ಅವಸ್ಥೆಯಲ್ಲಿ ನಾನಾರು ? ನೀನಾರು ? " ಸಾಮರಸ್ಯ ಸ್ಥಿತಿಯನ್ನು ಕುರಿತು ಇಲ್ಲಿ ಬೆಡಗಿನಿಂದ ಹೇಳಿದ್ದಾನೆ.

## ದಾಸಿಮಯ್ಯನ ವಚನಗಳಲ್ಲಿ ಪ್ರಾಣಿರೂಪಕ

ಅನುಭವಶೀಲನೂ, ವಚನಸಾಹಿತ್ಯದ ಆದ್ಯಪ್ರವರ್ತಕನೂ ಆದ ದಾಸಿಮಯ್ಯ ತನ್ನ ವಚನಗಳಲ್ಲಿ ಅಭಿವ್ಯಕ್ತಿಗಾಗಿ ಹತ್ತಾರು ಪ್ರಾಣಿರೂಪಕಗಳನ್ನು ಬಳಸಿಕೊಂಡಿದ್ದಾನೆ. ಕಾವ್ಯಸದೃಶವಾದ ಮತ್ತು ಹೃದಯಸ್ಪರ್ಶಿಯಾದ ಚಿಕ್ಕ ವಚನಗಳಲ್ಲಿ ಪ್ರಾಣಿರೂಪಕಗಳು ಹೇಗೆ, ಎಂತು ಬಂದಿವೆಯೆಂಬುದನ್ನು ನೋಡಬಹುದು. ಎತ್ತು, ಕತ್ತೆ, ಹಂದಿ, ಹೆಂಬೆಡಿಗ, ಹಾವು, ಇರುವೆ, ಕುನ್ನಿ, ಚಿಕ್ಕು, ಕುದುರೆ, ನರಿ, ಉಣ್ಣೆ ಮುಂತಾದವುಗಳನ್ನು ವಚನಗಳಲ್ಲಿ ಪ್ರಧಾನವಾಗಿ ಬಳಸಿದ್ದಾನೆ. ಕುನ್ನಿ ರೂಪಕವನ್ನು ಅನೇಕ ಸಲ ಉಪಯೋಗಿಸಿದ್ದಾನೆ.

" ಇಳೆ ನಿಮ್ಮ ದಾನ, ಬೆಳೆ ನಿಮ್ಮ ದಾನ
ನಿಮ್ಮ ದಾನವನುಂಡು ಅನ್ಯರ ಹೊಗಳುವ
ಕುನ್ನಿಗಳನೇನೆಂಬೆ "

"....ತಮ್ಮ ತಳಿಗೆಯ ಕೊಂಡುಹೋಗಿ ಅನ್ಯರ ಮನೆಯ ಲ್ಲುಂಬ ಕುನ್ನಿಗಳ ನಾನೇನೆಂಬೆ...." ಈ ಲೋಕದಲ್ಲಿ ನಾವಿದ್ದು ಪರಮಾತ್ಮನನ್ನು ಸ್ತುತಿಸದೆ ಅನ್ಯರನ್ನು ನೆನೆಯುತ್ತೇವೆ. ಅಂತಹರು ಕಚ್ಚುವ, ಬೊಗಳುವ ಕುನ್ನಿಗಳಲ್ಲದೆ ಮತ್ತೇನು ?

" ಕತ್ತೆ ಬಲ್ಲುದೆ ಕತ್ತುರಿಯ ವಾಸನೆಯ........" ಕತ್ತೆಗೆ ಕಸ್ತೂರಿಯ ಬೆಲೆ ತಿಳಿಯದು. ಹಾಗೆ ಭಕ್ತಿಯನರಿಯದ ವ್ಯರ್ಥ ಜೀವಿಗಳು ಪರಮಾತ್ಮನನ್ನು ತಿಳಿಯಲು ಅಸಾಧ್ಯ. ಹೀಗೆ ಕತ್ತೆ ರೂಪಕದಿಂದ ಈ ವಿಷಯ ನಿರೂಪಿಸಿದ್ದಾನೆ.

" ನೆರೆನಂಬಿ ಕರೆದರೆ ನರಿ, ಕುದುರೆಯಾಗಿ....ಹರಿಯನೆ" ಶಿವನನ್ನು ನಂಬಿ ಕರೆದರೆ ಸಾಕಿದ ಪ್ರಾಣಿಗಳು ಲಟಿಕೆ ಹೊಡೆದರೆ ಓಡಿ ಹತ್ತಿರ ಬರುವ ಹಾಗೆ ಶಿವನು ನಮ್ಮ ಬಳಿ ಸುಳಿಯುವನೆಂದೂ ಮೆಚ್ಚುಗೆ ವ್ಯಕ್ತಮಾಡುವನೆಂದೂ ಈ ಸಾದೃಶ್ಯದಿಂದ ತಿಳಿಸಿದ್ದಾನೆ.

ಬೆಕ್ಕು ಮಠದಲ್ಲಿದ್ದರೂ ತನ್ನ ಮುನ್ನಿನ ಸ್ವಭಾವವನ್ನು ಬಿಡದು. "........ಬರು ಶಠಗನ ಭಕ್ತಿ ದಿಟವೆಂದು ನೆಚ್ಚಲು ಬೇಡ. ಮಠದೊಳಗಿನ ಬೆಕ್ಕು ಇಲಿಯ ಕಂಡು ನೆಗೆದಂತೆ...." ಮಠದೊಳಗಿನ ಬೆಕ್ಕು ಇಲಿಯನ್ನು ಕಂಡಾಕ್ಷಣ ಅದನ್ನು ಹಾರಿ ಹಿಡಿಯುವಂತೆ ಠಕ್ಕನೂ ಮುನ್ನಿನ ವಿಷಯ ಸ್ವಭಾವವನ್ನು

ಬಿಡನೆಂದು ಬೆಕ್ಕಿನ ರೂಪಕದಿಂದ ವಿಶದಪಡಿಸಿದ್ದಾನೆ. ಇದೊಂದು ಸಮರ್ಥರೂಪಕ.

ಭಕ್ತ ನಿಷ್ಕಾಮಪರನಾಗಿರಬೇಕು. ಪ್ರಯತ್ನವಾದಿಯೂ ಆಗಿರಬೇಕು. ಛಲವಂತನಾಗಿರಬೇಕೆಂಬುದಕ್ಕೆ ಇರುವೆಯ ರೂಪಕ ಕೊಟ್ಟಿದ್ದಾನೆ.

“ ಇರುಹೆಯ ತೆರನರಿದು ನೆರೆವ ಛಲವಿಲ್ಲದೆ
ಮಾಡಿದವನ ಭಕ್ತಿ
ಇರುಹೆಯಿಂದ ಕರಕಷ್ಟ ಕಾಣಾ ರಾಮನಾಥ. ”

ಭಕ್ತಿ ಮಾಡುವಲ್ಲಿ ವಿಘ್ನ ಬರುವುದು ಸಹಜ. ಇರುಹೆಯು ವಿಘ್ನಗಳನ್ನು ಎದುರಿಸಿ ಗುರಿ ಸಾಧಿಸುವಂತೆ ನಿಜಭಕ್ತನು ತೊಂದರೆಗಳನ್ನು ಛಲವಂತನಾಗಿ ದಾಟಿ ಶಿವಸಾಕ್ಷಾತ್ಕಾರವನ್ನು ಹೊಂದಬೇಕು. ಇಲ್ಲಿ ಕೊಟ್ಟಿರುವ ಇರುಹೆಯ ಉದಾಹರಣೆ ಸೊಗಸಾಗಿದೆ.

ಲಿಂಗಾರ್ಪಿತವ ಮಾಡದೆ ಆಹಾರವನ್ನು ಕೊಂಡರೆ “ಕೋಳಿ ಹುಳುವನಾಯಿದು ತಿಂದಂತೆ ರಾಮನಾಥ....”

‘ ಅರ್ಥವುಂಟೆಂದು ಅಹಂಕರಿಸಿ ಮಾಡುವನ ಭಕ್ತಿ ತೊತ್ತಿನ ತೂರ್ಯಮೇಳದಂತೆ. ತನು, ಮನ, ಧನದಲ್ಲಿ ವಂಚನೆಯುಳ್ಳ ಪ್ರಪಂಚಿಯ ಮನೆಯಕೂಳು ‘ಶುನಕನ ಬಾಯ ಎಲುವ ಪ್ರತಿ ಶುನಕ ತಿಂದಂತೆ.’ ಅಹಂಕಾರಿಯ ಭಕ್ತಿ ವ್ಯರ್ಥವಾದುದು. ತನು, ಮನ, ಧನದಲ್ಲಿ ವಂಚನೆಯಿಲ್ಲದೆ ಭಕ್ತಿಯನ್ನು ಮಾಡಬೇಕು. ವಂಚನೆಯಿಂದ ಮಾಡಿದ ಭಕ್ತಿ ಒಂದು ನಾಯಿಯ

ಬಾಯಿಯಲ್ಲಿಯ ಎಲುವಿನ ತುಂಡನ್ನು ಮತ್ತೊಂದು ನಾಯಿ ಕಸಿದು ತಿಂದ ಹಾಗೆಂದು ತಿರಸ್ಕಾರದಿಂದ ಕಂಡಿದ್ದಾನೆ.

“ಉಣ್ಣಿ ಕೆಚ್ಚಲು ಹತ್ತಿ ಉಂಬುದೇ ನೊರೆವಾಲ? ಪುಣ್ಯ ಕ್ಷೇತ್ರದಲ್ಲಿ ಹುಟ್ಟಿ ಉಣ್ಣದವನು ಆ ಉಣ್ಣಿಯಿಂದ ಕರಕಷ್ಟ ರಾಮನಾಥ.’ ಪಶುವಿನ ಕೆಚ್ಚಲಿಗೆ ಉಣ್ಣಿ ಹತ್ತಿದ್ದರೂ ಅದು ಅದರ ನೊರೆವಾಲನ್ನುಣ್ಣಲು ತಿಳಿಯದು. ಹಾಗೆಯೇ ನಮ್ಮ ಬಳಿಯೇ ಶಿವನಿದ್ದರೂ ಅವನನ್ನು ಅರಿಯುವ ಗೊಡವೆಗೆ ಹೋಗೆವು. ಈ ಜಗತ್ತು ಪರಮೇಶ್ವರನು ವಾಸಿಸತಕ್ಕ ಒಂದು ಪುಣ್ಯ ಕ್ಷೇತ್ರ. ಇಂತಹ ಕ್ಷೇತ್ರದಲ್ಲಿ ನಾವಿದ್ದು ಅವನ ಕರುಣೆಗೆ ಪಾತ್ರರಾಗುವದಿಲ್ಲ. ಅಂದಬಳಿಕ ನಮ್ಮ ಸ್ಥಿತಿ ಆ ಉಣ್ಣಿಗಿಂತಲೂ ಕಷ್ಟಕರವಾದುದು. ಈ ರೂಪಕದ ಸೊಗಸು ಹಿರಿದು.

“....ಜಂಗಮ ಲಿಂಗದಲ್ಲಿ ನಂಬುಗೆಯಿಲ್ಲದವನು ಕೊಂಡ ಪ್ರಸಾದ ಬೆಕ್ಕು ನಾಯಿ ತಿಂದಂತೆ ಕಾಣಾ ರಾಮನಾಥ....’

ಜಂಗಮ ಲಿಂಗದಲ್ಲಿ ನಂಬಿಗೆಯಿಲ್ಲದವರು ಪ್ರಸಾದ ಸೇವಿ-ಸುವದೆಂದರೆ ಬೆಕ್ಕು ನಾಯಿಗಳು ತಿನ್ನುವದಕ್ಕೆ ಸಮಾನವೆಂಬ ಅಭಿಪ್ರಾಯ ಸೂಚಿಸಿದ್ದಾನೆ.

“....ಹಂದಿ ಶ್ರೀಗಂಧವನೆಂದೂ ಒಲ್ಲದು. ಕುಂದದೆ ಹರಿವುದು ಅಮೇಧ್ಯಕ್ಕೆ. ಶಿವಭಕ್ತನಾಗಿದ್ದು ಹಿಂದ ಬೆರಸಿದರೆ ಆ ಹಂದಿ-ಗಿಂತಲೂ ಕರಕಷ್ಟ ಕಾಣಾ ರಾಮನಾಥ.” ಹಂದಿ ತನ್ನ

ಸ್ವಭಾವವನ್ನು ಶ್ರೀಗಂಧ ಪೂಸಿದರೂ ಬಿಡುವದಿಲ್ಲ. ಹಾಗೆ ಒಮ್ಮೆ ಶಿವಭಕ್ತನಾದವನು ಪುನಃ ಮುನ್ನಿನ ಹೀನಗುಣಗಳಿಗೆಳೆಸಿದರೆ ಅವನ ಪಾಡು ಹಂದಿಗಿಂತಲೂ ಕೀಳಾದುದು.

ಹೀಗೆ ದಾಸಿಮಯ್ಯ ತನ್ನ ವಚನಗಳಲ್ಲಿ ಹತ್ತಾರು ಪ್ರಾಣಿ ರೂಪಕಗಳನ್ನು ಸೊಗಸಾಗಿಯೂ ವೈವಿಧ್ಯಮಯವಾಗಿಯೂ ಉಪಯೋಗಿಸಿ ವಿಷಯಗಳು ಮನದಟ್ಟಾಗುವಂತೆ ಮಾಡಿ-ದ್ದಾನೆ.

## ದಾಸಿಮಯ್ಯನ ತತ್ತ್ವಜ್ಞಾನ

ಶಿವನು ತನ್ನ ಲೀಲೆಗಾಗಿ ಜಗತ್ತನ್ನು ಸೃಜಿಸಿ ಅವನೇ ಅಂಶ ರೂಪ ತಳೆದನೆಂದು ಶಾಸ್ತ್ರಗ್ರಂಥಗಳು ಹೇಳುತ್ತವಷ್ಟೆ. ಇದರಿಂದ 'ಸ್ಥಲ'ವೆಂದು ಪ್ರಸಿದ್ಧನಾದ ಶಿವನು ಮೊದಲು ಲಿಂಗ ಅಂಗವೆಂದು ಎರಡು ಭಾಗವಾದನು. ಶಿವನೊಂದಿಗೆ ಅವಿನಾಭಾವದಿಂದಿರುವ ಶಕ್ತಿಯೂ ಎರಡು ತೆರನಾಯಿತು. ಲಿಂಗದೊಡನಿರುವುದು ಶಕ್ತಿಯಾಯಿತು. ಅಂಗದೊಡನಿರುವುದಕ್ಕೆ ಭಕ್ತಿಯೆಂದು ಹೆಸರಾಯಿತು. ಶಕ್ತಿಯ ಮತ್ತೊಂದು ರೂಪವೇ ಭಕ್ತಿ. ಭಕ್ತಿಗೆ ಮಹತ್ವದ ಸ್ಥಾನವಿದೆ ವೀರಶೈವ ಧರ್ಮದಲ್ಲಿ. ಭಕ್ತಿಯ ಸಂಬಂಧದಿಂದ ಲಿಂಗನು ಭಕ್ತ, ಮಹೇಶ, ಪ್ರಸಾದಿ, ಪ್ರಾಣಲಿಂಗಿ, ಶರಣ ಮತ್ತು ಐಕ್ಯನೆಂದು ಆರು ಅವಸ್ಥೆಗಳನ್ನು ಹೊಂದುತ್ತಾನೆ. ಆಯಾ ಸ್ಥಳಗಳಲ್ಲಿಯ ಶ್ರದ್ಧೆ, ನಿಷ್ಠೆ, ಅವಧಾನ, ಅನುಭವ, ಆನಂದ ಮತ್ತು ಸಮರಸ ಭಕ್ತಿಗಳು ಜೀವನೊಡನಿದ್ದು ಭಕ್ತನನ್ನು ಮುಂದಕ್ಕೊಯ್ದು ಶಿವಸಾಮರಸ್ಯವನ್ನುಂಟುಮಾಡುತ್ತವೆ. ಇದೇ ಷಟ್‌ಸ್ಥಲಶಾಸ್ತ್ರದ

ರಹಸ್ಯ. ದಾಸಿಮಯ್ಯನ ವಚನಗಳಲ್ಲಿ ಆತನ ಸಾಧನಮಾರ್ಗ ವನ್ನು ಕಾಣುತ್ತೇವೆ. "........ಕಾಣಬಾರದು, ಕೇಳಬಾರದು, ಒಂದಂಗದೊಳಡಗಿದ ನೂರೊಂದರ ಪರಿ ರಾಮನಾಥ" ಎಂಬ ವಚನದಲ್ಲಿ ನೂರೊಂದು ಸ್ಥಳಗಳ ರೀತಿಯನ್ನು ಸೂಚಿಸಿದ್ದಾನೆ. ಪರಮಾತ್ಮನು ಶಕ್ತಿವಿಶಿಷ್ಟನೆಂಬುದು ಈ ವಚನದಲ್ಲಿದೆ. "ಅಡಗ ನೊಳಗೆ ಹಾಲು ಅಡಗಿಪ್ಪ ಭೇದವನು, ಹಾಲೊಳಗೆ ತುಪ್ಪದ ಕಂಪು ಅಡಗಿಪ್ಪ ಪರಿಯನು, ಎಲೆ, ಮೃಡನೆ ನೀನು ಪ್ರಾಣ ಪ್ರಕೃತಿಯೊಳಡಗಿದ ಭೇದವನು ಲೋಕದ ಜಡರೆತ್ತ ಬಲ್ಲರೈ ರಾಮನಾಥ." ಶರೀರದಲ್ಲಿ ಆತ್ಮವು ಯಾರಿಗೂ ಕಾಣದಂತೆ ಅಡಗಿದೆಯೆಂಬುದನ್ನು ಎರಡು ಮೂರು ವಚನಗಳಲ್ಲಿ ಉದಾ ಹರಣೆಗಳಿಂದ ತಿಳಿಸಿದ್ದಾನೆ.

ಗುರುಕಾರುಣ್ಯ, ಇಷ್ಟಲಿಂಗಧಾರಣೆ, ಭಸ್ಮಲೇಪನ, ಪಂಚಾ ಕ್ಷರಿ ಮಂತ್ರದ ಅವಶ್ಯಕತೆ ಇವುಗಳನ್ನು ಕೆಳಗಿನ ವಚನಗಳಲ್ಲಿ ವಿವರಿಸಿದ್ದಾನೆ.

"ಗುರುಕಾರುಣ್ಯವಾದ ಬಳಿಕ ಅಂಗದ ಮೇಲೆ
ಲಿಂಗವಿರಬೇಕು
ಲಿಂಗವಿಲ್ಲದ ಗುರುಕಾರುಣ್ಯವು ಬತ್ತಿದ ಕೆರೆಯಲ್ಲಿ
ತಾವರೆಯು ಬತ್ತಿದಂತೆ ಕಾಣಾ ರಾಮನಾಥ."

"ಹಸ್ತಾಬ್ಜಮಥನದಿಂದೊತ್ತಿ ಭಸ್ಮವ ಮಾಡಿ
ಮತ್ತೆ ಪಂಚಾಕ್ಷರಿಯ ಮರುಜೀವಣಿಯು,
ಚಿತ್ತಶ್ರೋತ್ರದೊಳು ಧಾರೆಯನೆರೆಯಲು
ಆತ್ಮ ನಿನ್ನಂತೆ ಕಾಣಾ ರಾಮನಾಥ."

ಪ್ರಪಂಚಕ್ಕೆಲ್ಲ ದೇವನೊಬ್ಬನೆ, ಹಲವು ದೇವರಿಲ್ಲ.

"ಎತ್ತನೇರಿದ ಕರ್ತನೊಬ್ಬನೇ ಜಗಕೆಲ್ಲ,
ಎತ್ತು ಬೆಳೆದ ಧಾನ್ಯವನುಂಬ ದೇವರ್ಕಳಿಲ್ಲ ನಿಮ್ಮ
ತೊತ್ತಿನ ಮಕ್ಕಳು........"

ಭಕ್ತನಾದವನು ಗುರುಹಿರಿಯರು ಉಪದೇಶಿಸಿದ ರೀತಿಗೆ ಶ್ರದ್ಧೆಯಿಂದ ನಡೆದುಕೊಂಡು ಷಟ್‌ಸ್ಥಲ ಮಾರ್ಗದಲ್ಲಿ ಮುಂದುವರೆಯುತ್ತ ಹೋಗಬೇಕು. ಶಿವನನ್ನು ನಂಬಿ ಕರೆದರೆ ಭಕ್ತರ ಕೈವಾರಿಯಾಗುವನು. ಶ್ರದ್ಧೆಯು ಅಗತ್ಯವಿದೆ ಅದಕ್ಕೆ. 'ನೆರೆನಂಬಿ ಕರೆದಡೆ ನರಿ ಕುದುರೆಯಾಗಿ ಹರಿಯವು....ನಂಬದೆ ಕರೆದವರ ಹಂಬಲನೊಲ್ಲ ನಮ್ಮ ರಾಮನಾಥ.'

ಸತಿಪತಿಗಳು ಒಂದಾದ ಮನಸ್ಸಿನಿಂದ ಭಕ್ತಿ ಮಾಡಿದರೆ ಅದು ಶಿವನಿಗೆ ಹಿತವಾಗಿ ತೋರುತ್ತದೆ. 'ಸತಿಪತಿಗಳೊಂದಾದ ಭಕ್ತಿ ಹಿತವಾಗಿಪ್ಪುದು ಶಿವಂಗೆ' ಭಕ್ತನು ಭಕ್ತಸ್ಥಲದಲ್ಲಿ ಆತ್ಮಾಸೆ, ಡಾಂಭಿಕತನ, ಸುಳ್ಳಾಡುವುದು ಮೊದಲಾದವುಗಳನ್ನು ತ್ಯಜಿಸಬೇಕು. ಈ ಸ್ಥಿತಿಯಲ್ಲಿ ಸಾಧಕನಿಗೆ ಸದಾಚಾರವು ಅತ್ಯಗತ್ಯ.

ಹಿಡಿದ ವ್ರತವನ್ನು ಎಷ್ಟೇ ಕಷ್ಟ ಬಂದರೂ ಅಚಲ ಮನಸ್ಸಿನಿಂದ ಸಾಧಿಸುವುದೇ ನಿಷ್ಠಾಭಕ್ತಿ. 'ಇರುಹೆಯ ತೆರನಂದು ನೆರೆ ಛಲವಿಲ್ಲದೆ ಮಾಡಿದವನ ಭಕ್ತಿ ಇರುಹೆಯಿಂದ ಕರ ಕಷ್ಟ....' ಶಿವನು ಭಕ್ತನನ್ನು ನಾನಾ ಉಗ್ರಪರೀಕ್ಷೆಗೆ ಈಡು ಮಾಡುತ್ತಾನೆ.' ಎಂತಹ ಸಂದರ್ಭದಲ್ಲಿಯೂ ಸೋಲದವನಿಗೆ

ದೇವದೇವನು ಒಲಿಯುತ್ತಾನೆ. 'ಜರ ತನ್ನ ಭಕ್ತರ ಕಿರಿವಂತೆ ಮಾಡುವ....ಬೆದರದೆ ಬೆಚ್ಚದೆಯಿದ್ದರೆ, ಕರವಿಡಿದೆತ್ತಿಕೊಂಬ.' ಭಕ್ತಿ ಅಂಧಶ್ರದ್ಧೆಯಿಂದ ಕೂಡಿರಬಾರದು, ವಿಚಾರದಿಂದ ಕೂಡಿರಬೇಕು. ಅದನ್ನಿಲ್ಲಿ ದಾಸಿಮಯ್ಯ ಪ್ರತಿಪಾದಿಸಿದ್ದಾನೆ.

ಮನಸ್ಸಿನ ಪ್ರಸನ್ನತೆಯೇ ಪ್ರಸಾದಿಯ ಲಕ್ಷಣ. ಪ್ರಪಂಚದಲ್ಲಿ ನಮಗೆ ದೊರೆತುದೆಲ್ಲ ಈಶ್ವರನ ಪ್ರಸಾದ ಲಬ್ಧವಾದುದೆಂದು ತಿಳಿದು ಸುಖ-ದುಃಖಗಳನ್ನು ಸಮಾಧಾನದಿಂದ ಅನುಭವಿಸುವುದು ಪ್ರಸಾದಿಯ ಮುಖ್ಯ ಗುಣ. ಎಲ್ಲವೂ ಶಿವನ ಪ್ರಸಾದ, ಶರಣರ ಸೂಳ್ನುಡಿಗಳು ಪರಮಾತ್ಮನ ಪ್ರಸಾದ ವಾಣಿಗಳು. ಅವು ಶಿವನಿಗಿಂತ ಶ್ರೇಷ್ಠವಾದುವು. '....ನಿಮ್ಮ ಸೂಳ್ನುಡಿಯ ಒಂದರಗಳಿಗೆಯಿತ್ತಡೆ ನಿಮ್ಮನಿತ್ತೆ ಕಾಣಾ ರಾಮನಾಥ.'

ಕ್ರಿಯಾಜ್ಞಾನಗಳ ಸಮರಸದಿಂದ ಆತ್ಮಸಾಕ್ಷಾತ್ಕಾರವಾಗುವುದೆಂಬುದನ್ನು ದೇವರದಾಸಿಮಯ್ಯ ಸುಂದರವಾಗಿ ಅರುಹಿದ್ದಾನೆ. ಕೇವಲ ಜ್ಞಾನ ಅಥವಾ ಕೇವಲ ಕ್ರಿಯೆಯಿಂದ ಯಾವ ಉಪಯೋಗವೂ ಆಗುವದಿಲ್ಲ. ಇವೆರಡು ಬೆರೆತಾಗ ಒಳ್ಳೆ ಪರಿಣಾಮಕ್ಕೆಡೆಯಿದೆ. ಅದನ್ನೇ ಮುಂದಿನ ಉದಾಹರಣೆಯಿಂದ ಹೇಳಿದ್ದಾನೆ. 'ಅಗ್ನಿ ಸುಡಲಲ್ಲದೆ ಸುಳಿಯಲರಿಯದು, ವಾಯು ಸುಳಿವುದಲ್ಲದೆ ಸುಡಲರಿಯದು, ಆ ಅಗ್ನಿ ವಾಯು ಕೂಡಿದಲ್ಲದೆ ಅಡಿಯಿಡಲರಿಯದು, ಈ ಪರಿಯಂತೆ ನರರರಿವರೆ ಕ್ರಿಯಾಜ್ಞಾನ ಭೇದವ....' ಶಿವಶರಣರ ಸಹವಾಸವಾದ ಬಳಿಕ ಉಳಿದುದರ ಗೊಡವೆಯಿರಬಾರದು.

## ದೇವರದಾಸಿಮಯ್ಯನ ವಚನಗಳ ಪ್ರಭಾವ

ದಾಸಿಮಯ್ಯನ ವಚನಗಳ ಪ್ರಭಾವ ಬಸವಣ್ಣನವರಿಂದ ಹಿಡಿದು ಸರ್ವಜ್ಞಕವಿ ವರೆಗೆ ಹಲವಾರು ಗ್ರಂಥಕಾರರ, ಕವಿಗಳ ಮೇಲೆ ಒಂದಿಲ್ಲೊಂದು ರೀತಿ ಆಗಿದೆಯೆಂಬುದನ್ನು ನಿದರ್ಶನಗಳಿಂದ ತೋರಿಸಬರುತ್ತದೆ. ವಿಶೇಷವಾಗಿ ಈ ಪ್ರಭಾವ ಬಸವಣ್ಣನವರ ಮೇಲೆ ಆಗಿದೆಯೆಂಬುದನ್ನು ಕೆಳಗಿನ ಉದಾಹರಣೆಗಳಿಂದ ನೋಡಬಹುದು.

**ದಾಸಿಮಯ್ಯನ ವಚನ :**

ಸತಿಯರ ಸಂಗವನು, ಅತಿಶಯದ ಗ್ರಾಸವನು,
ಪೃಥ್ವಿಗೀಶ್ವರನ ಪೂಜೆಯನು ಅರಿವುಳ್ಳಡೆ
ಹೆರರ ಕೈಯಿಂದ ಮಾಡಿಸುವರೆ ರಾಮನಾಥ.

**ಬಸವಣ್ಣನವರ ವಚನ :**

ತನ್ನಾಶ್ರಯದ ರತಿಸುಖವನು, ತಾನುಂಬ ಊಟವನು
ಬೇರೆ ಮತ್ತೊಬ್ಬರ ಕೈಯಲ್ಲಿ ಮಾಡಿಸಬಹುದೆ ?
ಕೆಮ್ಮನೆ ಉಪಚಾರಕ್ಕೆ ಮಾಡುವರಲ್ಲದೆ,
ನಿಮ್ಮನೆತ್ತಬಲ್ಲರು ಕೂಡಲಸಂಗಮದೇವಾ.

**ದಾ. ವ. :**

ತೀವಿ ಕುಳ್ಳಿರ್ದ ಸಭೆ ಈಯಬಲ್ಲುದೆ ?
(ಕಾ)ವರೆ ಸಂಗ್ರಾಮಕ್ಕೆ ಹೋದವರೆಲ್ಲ ?
ಇರಿಯಬಲ್ಲರೆ ನೂರಕ್ಕೊಬ್ಬ, ಸಹಸ್ರಕ್ಕೊಬ್ಬ.
ಹುಣಿಸೆಯ ಹೂವೆಲ್ಲ ಕಾಯಾಗಬಲ್ಲುದೆ ರಾಮನಾಥ.

**ಬಸವಣ್ಣ :**

ಎಲ್ಲರೂ ವೀರರು, ಎಲ್ಲರೂ ಧೀರರು;
ಎಲ್ಲರೂ ಮಹಿಮರು, ಎಲ್ಲರೂ ಪ್ರಮಥರು;
ಕಾಳೆಗದ ಮುಖದಲ್ಲಿ ಕಾಣಬಾರದು,
ಓಡುವ ಮುಖದಲ್ಲಿ ಕಾಣಬಹುದು,
ನಮ್ಮ ಕೂಡಲಸಂಗನ ಶರಣರು ಧೀರರು,
ಉಳಿದವರೆಲ್ಲಾ ಅಧೀರರು !

**ದೇ. ದಾ. :**

ಹೊಲಬನರಿಯದ ಗುರುವ ಸುಲಭನಲ್ಲದ ಶಿಷ್ಯನ
ಕೆಲಬಲನ ನೋಡಿ ವಿಚಾರಿಸಿ ಮಾಡದುಪದೇಶ
ಅಂಧಕನ ಕೈಯ ಅಂಧಕ ಹಿಡಿದಂತೆ ಕಾಣಾ ರಾಮನಾಥ.

**ಸರ್ವಜ್ಞ :**

ಹೊಲಬನರಿಯದ ಗುರುವು ತಿಳಿಯಲರಿಯದ ಶಿಷ್ಯ !
ನೆಲೆಯನಾರಯ್ಯದುಪದೇಶ ಅಂಧಕನು
ಕೊಳನ ಹೊಕ್ಕಂತೆ ಸರ್ವಜ್ಞ.

**ದೇ. ದಾ. :**

ಉಣ್ಣೆ ಕೆಚ್ಚಲು ಹತ್ತಿ ಉಂಬುದೆ ನೊರೆವಾಲ ?
ಪುಣ್ಯಕ್ಷೇತ್ರದಲ್ಲಿ ಹುಟ್ಟಿ ಉಣ್ಣದವನು,
ಆ ಉಣ್ಣೆಯಿಂದ ಕರಕಷ್ಟ ರಾಮನಾಥ !

**ಸರ್ವಜ್ಞ :**

ಉಣ್ಣೆ ಕೆಚ್ಚಲೊಳಿದ್ದು, ಉಣ್ಣದದು ನೊರೆವಾಲ
ಪುಣ್ಯವ ಮಾಡಿ ಉಣ್ಣದವಸಿರವು
ಉಣ್ಣಿಗೂ ಕಷ್ಟ ಸರ್ವಜ್ಞ.

**ದೇ. ದಾ. :**

ಜ್ವರವಿಡಿದ ಬಾಯಿಗೆ ನೊರೆವಾಲು ಒಲಿವುದೆ ?
ನರಕದಲ್ಲಿ ಬೀಳುವ ಮನುಜರಿಗೆ ಹರಭಕ್ತಿ-
ಯೆಂಬುದು ಕರಗಹಿ ಕಾಣಾ ರಾಮನಾಥ.

**ಸರ್ವಜ್ಞ :**

ಜ್ವರ ಬಂದ ಮನುಜಂಗೆ, ನೊರೆವಾಲು ಕಹಿಯಕ್ಕು,
ನರಕದಲಿ ಬೀಳ್ವ ಅಧಮಂಗೆ ಶಿವಭಕ್ತಿ
ಹಿರಿದು ಕಹಿಯಕ್ಕು ಸರ್ವಜ್ಞ.

ದೇವರದಾಸಿಮಯ್ಯ ಸಂಗ್ರಹವಾಗಿ ಹೇಳಿದುದನ್ನೇ ಬಸವಣ್ಣನವರು ವಿವರವಾಗಿ ಹೇಳುತ್ತಾರೆ. ಎರಡು ಮೂರು ವಚನಗಳಲ್ಲಿ ದಾಸಿಮಯ್ಯನು ಹೇಳಿದುದನ್ನು ಬಸವಾದಿ ಪ್ರಮಥರು ಹತ್ತೆಂಟು ವಚನಗಳಲ್ಲಿ ಹೇಳುತ್ತಾರೆ. ಜನತೆಯ ಕವಿ ಸರ್ವಜ್ಞನ ಮೇಲೆಯೂ ದೇವರದಾಸಿಮಯ್ಯನ ವಚನಪ್ರಭಾವ ಅಗಾಧವಾಗಿದೆ.

## ದಾಸಿಮಯ್ಯನ ಶೈಲಿ

ಮೊದಲಿಗೆ ದಾಸಿಮಯ್ಯನ ವಚನಗಳನ್ನು ಒಂದೆಡೆ ಸಂಗ್ರಹಿಸಿದವರು ವಚನಪಿತಾಮಹ ಪಿ. ಜಿ. ಹಳಕಟ್ಟಿ ಅವರು.

ಅವನ ವಚನಗಳನ್ನೆಲ್ಲ ಮನದಂದು ಹೀಗೆ ಹೇಳಿದ್ದಾರೆ: "ದೇವರದಾಸಿಮಯ್ಯನ ವಚನಗಳು ಸೂತ್ರಪ್ರಾಯವಾಗಿದ್ದು ಅರ್ಥಗರ್ಭಿತವಾಗಿವೆ. ಅವುಗಳ ಭಾಷೆ ಅತ್ಯಂತ ಲಲಿತವೂ, ಮನೋಹರವೂ ಆಗಿದೆ. ಅವು ಬಹು ಸಂಕ್ಷಿಪ್ತವಾಗಿದ್ದರೂ ಬಹು ಸ್ಫುಟವಾದ ವಿಚಾರವುಳ್ಳವು. ಅವುಗಳಲ್ಲಿ ಕನ್ನಡ ಭಾಷೆಯ ಬಿಗಿಯಾದ ರಚನೆ, ಅದರ ಮಾಧುರ್ಯ ಇವೆಲ್ಲವೂ ಬಹು ಚೆನ್ನಾಗಿ ವ್ಯಕ್ತವಾಗುತ್ತವೆ" ಎಂದು ಸ್ತುತಿಸಿದ್ದಾರೆ.

ನೇಯ್ಗೆ ಕಾಯಕದಲ್ಲಿ ನಿರತನಾದ ದಾಸಿಮಯ್ಯ ವಚನಗಳನ್ನೂ ರಚಿಸುತ್ತಿದ್ದನು. ಅವನ ೧೫೦ ವಚನಗಳು ಈಗ ದೊರೆತಿವೆ. ಅವುಗಳ ಸಂಸ್ಕರಣ ಇನ್ನೂ ನಡೆಯಬೇಕಾಗಿದೆ. ಈಗ ದೊರೆತಿರುವ ಸಾಮಗ್ರಿಯಿಂದ ದೇವರದಾಸಿಮಯ್ಯನ ವಚನಗಳೇ ಮೊದಲಿನವೆಂದು ಹೇಳಬಹುದು. ಆದರೆ ಅವನ ಪೂರ್ವದಲ್ಲಿಯೂ ವಚನಗಳಿದ್ದಿರಬೇಕೆಂಬ ವಿಚಾರ 'ಸೂಳ್ನುಡಿ ಒಂದರಗಳಿಗೆಯಿತ್ತರೆ ನಿಮ್ಮನಿತ್ತೆ' ಎಂಬ ನುಡಿಯಿಂದ ತಿಳಿದು ಬರುವುದು. ಪ್ರಾಚೀನರೂ ವಚನ ರಚಿಸಿರಬೇಕು. ಆದರೆ ಅವು ಈ ವರೆಗೂ ದೊರೆಯದಿರುವುದು ಕನ್ನಡ ಸಾಹಿತ್ಯಕ್ಕೆ ಆಗಿರುವ ದೊಡ್ಡ ಹಾನಿಗಳಲ್ಲೊಂದು. ಕನ್ನಡ ಸಾಹಿತ್ಯಕ್ಕೆ ದೇವರದಾಸಿಮಯ್ಯನ ಸಿಕ್ಕ ವಚನಗಳು 'ತವನಿಧಿ'ಯೋಪಾದಿಯಲ್ಲಿವೆ. ಬಸವಾದಿ ಪ್ರಮಥರ ವಚನಗಳು ದೇವರದಾಸಿಮಯ್ಯನ ಸಂಬಂಧವನ್ನಿಟ್ಟುಕೊಂಡು ಬೆಳೆದಂತಿವೆ. ದೊರೆತ ೧೫೦ ವಚನಗಳಲ್ಲಿ ಎಲ್ಲವೂ ಚಿಕ್ಕವಾಗಿವೆ. ದೊಡ್ಡ ವಚನಗಳು ತೀರ ಕಡಿಮೆ. ಅವನ ವಚನಗಳು ಚಿಕ್ಕವಾದರೂ ಅರ್ಥ

ಹಾಲು ಒಲಿವುದೆ?' ಮುಂತಾದ ವಚನಭಾಗಗಳು ನಾಣ್ಣುಡಿಗಳಾಗಿ ಬಳಕೆಯಲ್ಲಿವೆ ಇಂದಿಗೂ. ಸುವರ್ಣಾಕ್ಷರಗಳಿಂದ ಬರೆದಿಡಲು ಅರ್ಹವಾದ ನುಡಿಮುತ್ತುಗಳಿವು.

ದೇವರದಾಸಿಮಯ್ಯನ ಬಗೆಗೆ ಅನೇಕ ಗ್ರಂಥಗಳು ಉಪಲಬ್ಧವಾಗಿವೆ. ಅವನೊಬ್ಬ ಐತಿಹಾಸಿಕ ವ್ಯಕ್ತಿ, ಕಾಲ್ಪನಿಕ ವ್ಯಕ್ತಿಯಲ್ಲ. ಉದಾತ್ತ ಧರ್ಮಪ್ರಚಾರಕ, ವಚನಸಾಹಿತ್ಯದ ಆದ್ಯಪ್ರವರ್ತಕ, ಉತ್ಕೃಷ್ಟ ವಚನಗಳ ಕರ್ತೃ, ಅವನೊಬ್ಬ ಅತ್ಯಂತ ಸಾಹಸಿ, ವಾದಪಟು ಮತ್ತು ಕುಶಲಗಾರ, ಮೇಲಾದ ಧರ್ಮೋಪದೇಶಕ.

———

## ಉಪನ್ಯಾಸ ಗ್ರಂಥಮಾಲೆ

## ಇತ್ತೀಚಿನ ಪ್ರಕಟನೆಗಳು



೧. ಪ್ರಾಚೀನ ಕರ್ನಾಟಕದ ಶಿಕ್ಷಣಕ್ರಮ

—ಜಿ. ಎಸ್. ದೀಕ್ಷಿತ

೨. ತಮಿಳು ಶಿವಭಕ್ತೆ ಕಾರಿಕಾಲಮ್ಮೆ

—ಎಂ. ಎಸ್. ಲಕ್ಷ್ಮೆ

೩. ಜಾನಪದ ವೀರಗೀತೆಗಳು

—ಬಿ. ಬಿ. ಮಹೀಶವಾಡಿ

೪. ಕಸದಿಂದ ರಸೋತ್ಪತ್ತಿ

—ಸಂಜೀವರಾವ ಕಲ್ಲಾಪುರ

೫. ಭಾರತದ ಪ್ರಾಚೀನ ನಾಣ್ಯಗಳು

—ಎ. ಎಂ. ಅಣ್ಣೀಗೇರಿ

೬. ಗಳಗನಾಥರ ಕಾದಂಬರಿಗಳು

—ಕೃಷ್ಣಮೂರ್ತಿ ಕಿತ್ತೂರ

ವ್ಯಾಸಂಗ ವಿಸ್ತರಣ ಮತ್ತು ಪ್ರಕಟನ ವಿಭಾಗ

ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ